ಬಣ್ಣದ ಚಿಟ್ಟೆ, ಹೊನ್ನಿನ ಚಿಟ್ಟೆ, ಬಾರೇ ನೋಡೇ!
ನನ್ನೀ ತೋಟ, ನನ್ನೀ ಪುಷ್ಪ ಎಲ್ಲಾ ನೋಡೇ!
ಬಣ್ಣದ ಚಿಟ್ಟೆ ನೋಡೇ ಇಲ್ಲಿ, ಜೆಮ್ಸ್ ಇವೆ ಬಹಳಷ್ಟು!
ನಿನಗೂ, ನನಗೂ, ಗೆಳೆಯರಿಗೂ ಸಹ ಬೇಕಾದಷ್ಟು!






## ಜೆಮ್ಸ್ ಸವಿಯುವಾಗ
## ಪ್ರತಿ ನಿಮಿಷವೂ ರಸನಿಮಿಷ!

ಕ್ಯಾಡ್‌ಬರಿಸ್
ಚಾಕ್‌ಲೇಟ್‌ಗಳು

ಕ್ಯಾಡ್‌ಬರಿಸ್ ಜೆಮ್ಸ್ ಮಣಿಮಾಲೆ, ಬಹುವಿಧ ಸಂತಸದ ಲೀಲೆ!

OBM/6642/KN



# ಚಂದಮಾಮ

ಹಾಗೂ

'ಚಂದಮಾಮ ಕ್ಲಾಸಿಕ್ಸ್ ಮತ್ತು
ಕಾಮಿಕ್ಸ್'ಗಳಿಂದ

ತಮ್ಮೆಲ್ಲಾ ಓದುಗರಿಗೂ ಅತ್ಯಂತ ಸಂತಸಮಯ

ಹೊಸ ವರ್ಷದ
ಹಾರೈಕೆಗಳು.



# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಕೌಟುಂಬಸ್ಥನಾದವನು ತನ್ನ ಶೀರಾ ಸಮೀಪದವರು ಆಮೋದಿಸುವಂತೆ ನಡೆದುಕೊಳ್ಳಬೇಕಾಗುತ್ತದೆ. ಯೋಗ್ಯಪಾತ್ರನಾದ ಒಬ್ಬನಿಗೆ ಉಪಕಾರ ಮಾಡಬೇಕೆಂದು ಯಜಮಾನನಿಗೆ ಮನಸ್ಸಿದ್ದರೂ ಅವನ ಆತ್ಮೀಯರಾದವರೂ ಅವನೊಂದಿಗೆ ಹೊಂದಿಕೊಳ್ಳಬೇಕಾಗುತ್ತೆ. ಹಾಗೆ ಹೊಂದಲಾರದವರನ್ನು, ಅವರಿಗಿರುವ ಯಾವುದೋ ಒಂದು ಮೂಢ ವಿಶ್ವಾಸವನ್ನಾದರೂ ಉಪಯೋಗಿಸಿ ಸತ್ಕಾರ್ಯವನ್ನು ಸಾಧಿಸಿಕೊಳ್ಳುತ್ತಾನೆ ಸಜ್ಜನನು. "ಮಾಯದ ಕನಸು" ಎಂಬ ಕಥೆಯಲ್ಲಿ ಆ ಸಜ್ಜನನನ್ನು ಸಂಧಿಸುವಿರಿ.

## ಅಮರವಾಣಿ

ಸರ್ಪಃ ಕ್ರೂರಃ ಖಲಃ ಕ್ರೂರಃ ಸರ್ಪಾತ್ ಕ್ರೂರತರಃ ಖಲಃ
ಮಂತ್ರೌಷಧವಶಃ ಸರ್ಪಃ ಖಲಃ ಕೇನ ನಿವಾರ್ಯತೇ

ಕ್ರೌರ್ಯದಲ್ಲಿ ವಿಷಸರ್ಪಕ್ಕೂ ದುಷ್ಟನಿಗೂ ಭೇದವಿಲ್ಲ; ಆದರೆ ಹಾವಿನ ಕಡಿತವನ್ನು ಮಂತ್ರೌಷಧಗಳಿಂದ ನಿವಾರಿಸಬಹುದು. ದುಷ್ಟನ ಕೇಡಿಗೆ ಅದು ಸಾಧ್ಯವಿಲ್ಲ.

ಸಂಪುಟ : ೬೮ ಜನವರಿ '೮೨ ಸಂಚಿಕೆ : ೧

ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦








# ಹುಚ್ಚಮುಂಡೆ

ಒಂದು ಊರಿನಲ್ಲಿದ್ದ ಪಾಠಶಾಲೆಯಲ್ಲಿ ಒಂದು ಕುಟುಂಬದ ಅಣ್ಣ ತಮ್ಮಂದಿರು ಪಾಠಗಳನ್ನು ಕಲಿಯುತ್ತಿದ್ದರು. ಅವರಲ್ಲಿ ವೆಂಕಪ್ಪನೆಂಬುವನು ಸಹೋದರರಲ್ಲಿ ಕಡೆಯುವನಾಗಿದ್ದನು. ಅವನಿಗೆ ಅಣ್ಣಂದಿರಿಗಿಂತ ಚೆನ್ನಾಗಿಯೇ ವಿದ್ಯೆ ಹತ್ತಿಕೊಳ್ಳುತ್ತಿತ್ತು. ಇವನು ಬಹಳ ಬುದ್ಧಿವಂತನಾದ ಹುಡುಗನೆಂದು ಅವನಿಗೆ ಕಲಿಸುವ ಉಪಾಧ್ಯಾಯರು ಹೇಳುತ್ತಿದ್ದರು. ಆದರೆ ಅವನ ಜತೆಯಲ್ಲೇ ಪಳಗಿ ಕೂಡಾಡಿಕೊಂಡಿದ್ದ ಅವನ ಅಣ್ಣಂದಿರು ತಂದೆಯೊಂದಿಗೆ "ಎಷ್ಟು ಕಲಿಯುವುದರಲ್ಲಿ ಗಟ್ಟಿಗನಾದರೂ ಇವನಿಗೆ ಹತ್ತು ಜನರ ಮುಂದೆ ಹೇಗೆ ನಡೆದುಕೊಳ್ಳಬೇಕೆಂದು ಗೊತ್ತಿಲ್ಲ. ಇಂಥವನು ಪ್ರಭುತ್ವದ ಉದ್ಯೋಗ ಶಾಖೆಯಲ್ಲಿ ಏನಾದರೂ ಉದ್ಯೋಗದಲ್ಲಿದ್ದು ಬದುಕಬೇಕೇ ಹೊರತು ಬೇರೆ ಯಾವುದಕ್ಕೂ ಉಪಯೋಗವಿಲ್ಲ" ಎನ್ನುತ್ತಿದ್ದರು. ಅವರ ತಂದೆಗೆ ರಾಜಾಸ್ಥಾನದಲ್ಲಿ ಸ್ವಲ್ಪ ಮಾತಿನವಾಸಿ ಇತ್ತು. ಆದಕ್ಕೆ ವೆಂಕಪ್ಪನು ಒಪ್ಪದೆ ತಂದೆಯೊಂದಿಗೆ, "ಅಪ್ಪಾ, ಮಹಾರಾಜರ ಕಾರ್ಯಾಲಯದಲ್ಲಿ ಕೆಲಸ ಮಾಡಲು ಇಷ್ಟವಿಲ್ಲವೆಂದು ಹೇಳಲಾರೆನಾದರೂ, ಅಣ್ಣಂದಿರು ಹೇಳುವಹಾಗೆ ಒಪ್ಪಿಕೊಳ್ಳಲು ನನಗೆ ಇಷ್ಟವಿಲ್ಲ. ನಾನು ಬೇರೆ ಕೆಲಸಗಳಿಗೆ ತಕ್ಕವನಲ್ಲವೆಂದು ಗೊತ್ತಾದ ಮೇಲೆ ಬೇಕಾದರೆ ಪ್ರಭುತ್ವದ ಉದ್ಯೋಗಕ್ಕೆ ಸೇರಿಕೊಳ್ಳುತ್ತೇನೆ. ಒಂದು ವರ್ಷ ನಾನು ವ್ಯವಸಾಯ ಮಾಡಿ ನನ್ನ ಯೋಗ್ಯತೆಯನ್ನು ಎಲ್ಲರಿಗೂ ತೋರಿಸಬೇಕೆಂದಿದ್ದೇನೆ" ಎಂದನು.

ಅದಕ್ಕೆ ಒಪ್ಪಿಕೊಂಡು ತಂದೆ ಅವನಿಗೆ ಐದು ಎಕರೆ ಭೂಮಿಯನ್ನು ಕೊಟ್ಟು, "ವ್ಯವಸಾಯ ಮಾಡಿ ತೋರಿಸು" ಎಂದನು. ವೆಂಕಪ್ಪನು ಆ ನೆಲದ ಮಣ್ಣನ್ನು ಪರೀಕ್ಷಿಸಿ, ಯಾವ ಬೆಳೆ ಚೆನ್ನಾಗಿ ಬರುವುದೆಂದು ನಿರ್ಣಯಿಸಿ, ಆ ಬೆಳೆಯನ್ನೇ ಬೆಳೆಸಿದನು. ಶ್ರದ್ಧೆಯಿಂದ ಗಮನಿಸುತ್ತ, ತಕ್ಕ ಜಾಗ್ರತೆಯನ್ನೂ ವಹಿಸಿ ಕೆಲಸಮಾಡಿದನು. ಆ ವರ್ಷ ಅವನ ಹೊಲಗಳಲ್ಲಿ ಒಳ್ಳೆಯ ಬೆಳೆ ಬಂದಿತು. ಅಣ್ಣಂದಿರಿಗಿಂತ ಹೆಚ್ಚಿಗೇ ಫಸಲನ್ನು ಪಡೆದನು.

ಅದರಿಂದ ಸಂತುಷ್ಟನಾದ ವೆಂಕಪ್ಪನು, ಬಂದ ಬೆಳೆಯನ್ನೆಲ್ಲಾ ಆ ಕೂಡಲೇ ಮಾರಿ ಹಣ ಮಾಡಿಕೊಂಡನು. ತುಂಬಾ ಲಾಭ ಸಂಪಾದಿಸಿಕೊಂಡೆನೆಂಬ

ಉತ್ಸಾಹದಲ್ಲಿ ಸ್ವಲ್ಪ ಹಣವನ್ನು ವಿಲಾಸಗಳಿಗಾಗಿ ವ್ಯಯಿಸಿದನು. ಆರು ತಿಂಗಳೊಳಗೆ ಅವನ ಹತ್ತಿರ ಇದ್ದ ಹಣವೆಲ್ಲವೂ ಖರ್ಚಾಗಿ ಹೋಯಿತು. ಮತ್ತೆ ಹೊಸ ಬೆಳೆಯನ್ನು ಬೆಳಸಬೇಕಾದರೆ ಮೂಲಧನ ಬೇಕಾಗಿತ್ತು. ಅದಕ್ಕೇನು ಮಾಡುವುದೆಂದು ಗೊತ್ತಾಗದೆ ಮಿಡುಕುವ ಪರಿಸ್ಥಿತಿಯುಂಟಾಯಿತು. ಅವನಿಗಿಂತ ಕಡಿಮೆಯೇ ಬೆಳೆ ತೆಗೆದವರೆಲ್ಲ ನಿಶ್ಚಿಂತರಾಗಿ, ತಮ್ಮ ಕಾರ್ಯ ಮುಂದುವರಿಸಿಕೊಂಡಿರುವುದನ್ನು ನೋಡಿ ಕೊರಗತೊಡಗಿದನು.

ಹೀಗಾಗಲು ಮುಖ್ಯ ಕಾರಣವೇನೆಂದರೆ, ಉಳಿದವರೆಲ್ಲರೂ ಧಾನ್ಯಗಳಿಗೆ ಒಳ್ಳೆಯ ಬೆಲೆ ಬರುವವರೆಗೂ ಕಾದಿದ್ದು ಆಮೇಲೆ ಮಾರಾಟ ಮಾಡಿದ್ದರು. ಎಲ್ಲಾ ಕಾಲದಲ್ಲಿಯೂ ಒಂದೇ ಬಗೆಯ ಧಾನ್ಯವನ್ನು ಬೆಳೆಸದೆ, ಅಗತ್ಯವಿರುವ ಬೇರೆ ಬೇರೆ ಧಾನ್ಯಗಳನ್ನೂ ಬೆಳೆಯಿಸಿದ್ದರು. ವೆಂಕಪ್ಪ ತನ್ನ ಐದು ಎಕರೆ ಹೊಲಗಳಲ್ಲಿಯೂ ಒಂದೇ ಬಗೆಯ ಧಾನ್ಯವನ್ನು ಬೆಳೆಸಿ ಕೂಡಲೇ ಮಾರಿ ಕ್ಷಣಿಕೋತ್ಸಾಹವನ್ನು ಅನುಭವಿಸಿ, ಕಡೆಗೆ ಇಮ್ಮಡಿ ಬೆಲೆ ಕೊಟ್ಟು ಕೊಂಡುಕೊಳ್ಳುವಂಥ ಸ್ಥಿತಿಗೆ ಬಂದನು.

"ಇವನೊಬ್ಬ ಹೆಡ್ಡಮುಂಡೆಯೆಂದು ಮೊದಲೇ ಹೇಳಿದೆವು. ಬೇಗ ಇವನಿಗೊಂದು ಉದ್ಯೋಗ ಕೊಡಿಸಿಬಿಡಿ ಅಪ್ಪಾ" ಎಂದರು ಅವನ ಅಣ್ಣಂದಿರು.

ಆಗ ವೆಂಕಪ್ಪನು ತಂದೆಯ ಕಾಲು ಹಿಡಿದು, "ವ್ಯವಸಾಯ ನನಗೆ ಕೂಡಿಬರಲಿಲ್ಲವೆಂಬುದು ನಿಜ ಅಪ್ಪಾ, ಆದರೆ ವ್ಯವಸಾಯವೆಂದರೆ ಕಾಯಕಷ್ಟ ತುಂಬಾ ಬೇಕಾಗುತ್ತದೆ. ನನಗೆ ಬುದ್ಧಿ ಬಲವೇ ಮುಖ್ಯವಾದುದರಿಂದ, ವ್ಯಾಪಾರ ಮಾಡುವುದೇ ಒಳ್ಳೆಯದು. ಈಸಾರಿ ಒಂದು ಸಾವಿರ ವರಹ ಕೊಟ್ಟು ನೋಡಿ, ನಾನು ವ್ಯಾಪಾರದಲ್ಲಿ ಮುಂದೆ ಬರುತ್ತೇನೆ" ಎಂದನು.



ಅದನ್ನೂ ನೋಡೋಣವೆಂದು ತಂದೆ ಅವನಿಗೆ ಒಂದು ಸಾವಿರ ವರಹಗಳನ್ನು ಕೊಟ್ಟನು.

ವೆಂಕಪ್ಪನು ಊರೊಳಗೆ ಯಾವ ವಸ್ತುಗಳು ಹೇಗೆಹೇಗೆ ಮಾರಲ್ಪಡುವುದೆಂಬುದನ್ನು ನೋಡಿದನು. ಸುತ್ತುಮುತ್ತಲೂ ಆ ವಸ್ತುಗಳು ಅಗ್ಗಕ್ಕೆ ಸಿಗುವ ಪ್ರಾಂತಗಳು ಯಾವುದೆಂಬುದನ್ನೂ ಹುಡುಕಿದನು. ಅಲ್ಲಿಂದ ಸರಕುಗಳನ್ನು ಕೊಂಡುಕೊಂಡು ತಂದು, ಊರೊಳಗೆ ಉಳಿದವರಿಗಿಂತ ಸ್ವಲ್ಪ ಕಡಿಮೆ ಬೆಲೆಗೇ ಮಾರಲು ಪ್ರಾರಂಭಿಸಿದನು. ಅವನ ವ್ಯಾಪಾರವು ದಿನದಿಂದ ದಿನಕ್ಕೆ ಪ್ರವರ್ಧಮಾನವಾಗುತ್ತಾ ಹೋಯಿತು. ವ್ಯಾಪಾರವು ಇಷ್ಟು ಸುಲಭವಾಗಿರುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಎರಡು ಮೂರು ತಿಂಗಳುಗಳೊಳಗೇ ತಂದೆಯಿಂದ ಪಡೆದುಕೊಂಡ ಸಾವಿರ ವರಹಗಳನ್ನು ಹತ್ತು ಸಾವಿರ ವರಹಗಳಾಗಿ ಹೆಚ್ಚಿಸಿಬಿಟ್ಟನು.



ಅಣ್ಣಂದಿರು ತನ್ನನ್ನು ಎಲ್ಲರ ಹತ್ತಿರವೂ "ಹೆಡ್ಡ ಮುಂಡೆ" ಎಂದು ಹಂಗಿಸುವರೆಂದು ಅವನಿಗೆ ಗೊತ್ತಿತ್ತು. ಅದಕ್ಕಾಗಿ ವೆಂಕಪ್ಪ ತಾನಾಗಿಯೇ ಪ್ರತಿ ವ್ಯಾಪಾರಸ್ಥನ ಬಳಿಗೂ ಹೋಗಿ. "ನೋಡಿದಿರಾ, ನಾನು ಹೇಗೆ ವ್ಯಾಪಾರ ಮಾಡುವೆನೆಂದು? ಈ ಎರಡು ಮೂರು ತಿಂಗಳೊಳಗೆ ಒಂದು ಸಾವಿರನ್ನು ಹತ್ತು ಸಾವಿರ ಮಾಡಿಕೊಂಡಿದ್ದೇನೆ. ನಿಮಗೆಲ್ಲಾ ಅಷ್ಟು ದೊಡ್ಡ ಲಾಭ ಬರುತ್ತದೇನು?" ಎಂದು ಕೇಳಿದನು.

ಒಬ್ಬ ವ್ಯಾಪಾರಿ ಕೂಡಾ ತನಗೆ ದೊಡ್ಡ ಲಾಭ ಬರುತ್ತದೆಂಬುದನ್ನು ಒಪ್ಪಿಕೊಳ್ಳಲೇ ಇಲ್ಲ. ಅವರು ಆಶ್ಚರ್ಯಪಡುತ್ತಾ, "ನಿನಗೆ ಅಷ್ಟು ಲಾಭ ಹೇಗೆ ಬರುತ್ತದೋ ಗೊತ್ತಾಗುವುದಿಲ್ಲ. ನಾವು ಅಸಲಿಗೇ ಪೇಚಾಡಬೇಕಾಗಿದೆ." ಎನ್ನುತ್ತಿದ್ದರು.

ವೆಂಕಪ್ಪನು ತನ್ನಷ್ಟು ಬುದ್ಧಿವಂತನು ಯಾರೂ ಇಲ್ಲವೆಂದುಕೊಂಡನು. ಸಂಪಾದಿಸಿದ ಹಣವನ್ನು ಇಷ್ಟ ಬಂದ ಹಾಗೆ ಖರ್ಚು ಮಾಡಲಿಕ್ಕೂ ತೊಡಗಿದನು. ತಿಂಗಳಿಗೆ ಸಾವಿರ ರೂಪಾಯಿಯನ್ನು ಉಳಿಸಿಕೊಂಡರೆ ಸಾಕೆಂಬುದು ಅವನ ಅಭಿಪ್ರಾಯ.

ಆರು ತಿಂಗಳಾದ ಮೇಲೆ ವೆಂಕಪ್ಪನ ಬಳಿಗೆ ಪ್ರಭುತ್ವದ ಕಡೆಯಿಂದ ತೆರಿಗೆ ವಸೂಲುಮಾಡುವ ಅಧಿಕಾರಿಯೊಬ್ಬನು ಬಂದು, "ನಿಮಗೆ ಚೆನ್ನಾಗಿ ಲಾಭ ಬರುತ್ತದಲ್ಲವೆ?" ಎಂದುಕೇಳಿದನು.

"ಹೌದು ಹೌದು. ಊರೊಳಗಿನ ಬೇರೆ ವ್ಯಾಪಾರಿಗಳಿಗೆ ಬರುವುದಕ್ಕಿಂತಲೂ ಹೆಚ್ಚಾಗಿಯೇ ಬರುತ್ತದೆ" ಎಂದನು ಹೆಮ್ಮೆಯಿಂದ ವೆಂಕಪ್ಪ.

"ಅದಕ್ಕೇ ವಿಚಾರಿಸಲು ಬಂದೆ. ನಿಮ್ಮ ಲಾಭಗಳ ವಿಷಯ ನಮ್ಮ ಕಾರ್ಯಾಲಯದ ವರೆಗೂ ಬಂದಿದೆ. ನೀವು ಪ್ರಭುತ್ವಕ್ಕೆ ಮೂವತ್ತು ಸಾವಿರ ವರಹಗಳನ್ನು ವ್ಯಾಪಾರಲಾಭದ ತೆರಿಗೆಯಾಗಿ ಕಟ್ಟಬೇಕಾಗಿದೆ" ಎಂದನು ಅಧಿಕಾರಿ.

"ವ್ಯಾಪಾರಲಾಭದ ತೆರಿಗೆಯೇನದು?" ಎಂದು ಆಶ್ಚರ್ಯದಿಂದ ವೆಂಕಪ್ಪ ಬಾಯಿಬಿಟ್ಟನು.

"ನಿಮಗೆ ಬಂದ ಲಾಭದಲ್ಲಿ ಶೇಕಡಾ ಮೂವತ್ತರ ಹಾಗೆ ಪ್ರಭುತ್ವಕ್ಕೆ ತೆರಿಗೆ ಕಟ್ಟಬೇಕು. ಇದುವರೆಗೆ ನೀವೇ ಕೊಟ್ಟ ಲೆಕ್ಕದ ಪ್ರಕಾರ ನಿಮಗೆ ಒಂದು ಲಕ್ಷ ವರಹಗಳು ಲಾಭ ಬಂದಿವೆ. ಅಂದರೆ ಮೂವತ್ತು ಸಾವಿರ ವರಹ ತೆರಿಗೆ ಕಟ್ಟಬೇಕು. ನಿಮ್ಮ ಹಾಗೆಯೇ ಇತರ ವ್ಯಾಪಾರಿಗಳಿಗೂ ಹೀಗೆಯೇ ವಿಧಿಯಿದೆ. ಬೇಗನೇ ಕಟ್ಟಿಬಿಡಿರಿ. ಇಲ್ಲದಿದ್ದರೆ ದಂಡ ತೆರಿಗೆ ಸೇರಿ ಕಟ್ಟಬೇಕಾಗುತ್ತದೆ!" ಎಂದನು ಅಧಿಕಾರಿ.

ವೆಂಕಪ್ಪನಿಗೆ ಎದೆ ನಿಂತು ಹೋಗುದಂತಾಯಿತು. ಈ ತೆರಿಗೆಯನ್ನು ಕಟ್ಟಬೇಕಾದರೆ ತಾನು ಸಾಲ ಕೇಳುವುದರ ಹೊರತು ಬೇರೆ ಮಾರ್ಗವಿಲ್ಲ. ಉಳಿದ ವ್ಯಾಪಾರಿಗಳು ಲಾಭವಿಲ್ಲವೆಂದು ಏಕೆ ಹೇಳಿದರೆಂದು ಈಗ ಅವನಿಗೆ ಅರ್ಥವಾಯಿತು.

ತುಂಬ ಅನುಭವಸ್ಥರಾದ ವೆಂಕಪ್ಪನ ತಂದೆ, ಉಪಾಯವಾಗಿ ತೆರಿಗೆಯ ಅಧಿಕಾರಿಯೊಡನೆ ಮಾತಾಡಿ, ಹೊಸ ವ್ಯಾಪಾರಿಗೆ ಎರಡು ವರ್ಷ ಸಲಿಗೆ ಕೊಡುವ ಪದ್ಧತಿಯನ್ನು ಹೇಳಿ ವಾದಿಸಿ, ಒಪ್ಪಿಸಿ, ಕಳುಹಿಸಿದನು. ಅನಂತರ ವೆಂಕಪ್ಪನನ್ನು "ನೋಡಿ, ನಿನ್ನ ಅಣ್ಣಂದಿರು ಹೇಳುವಹಾಗೆ ನೀನೊಬ್ಬ ಹೆಡ್ಡಮುಂಡೆಯೇ ನಿಜ. ನಾಳೆ ನಾವಿಬ್ಬರೂ ರಾಜಧಾನಿಗೆ ಹೋಗೋಣ. ಅಲ್ಲಿ ನಿನಗೆ ಯಾವುದೋ ಒಂದು ಉದ್ಯೋಗ ಕೊಡಿಸೋಣ" ಎಂದನು.

ವೆಂಕಪ್ಪ ಅವಮಾನದಿಂದ ತಲೆಬಗ್ಗಿಸಿಕೊಂಡು, "ನನಗಾಗಿ ನೀವು ಶ್ರಮ ಪಡಬೇಡಿ ಅಪ್ಪಾ. ನನ್ನ ಉದ್ಯೋಗ ನಾನೇ ಸಂಪಾದಿಸಿಕೊಳ್ಳುತ್ತೇನೆ. ಸುಳ್ಳುಪಳ್ಳು ಹೇಳಬೇಕಾಗಿ ಬರುವಂತಹ ವೃತ್ತಿ ನನಗೆ ಹಿಡಿಸುವಂಥದಲ್ಲ. ಆದರೆ ನನ್ನ ಬುದ್ಧಿವಂತಿಕೆಯಿಂದಲೇ ರಾಜರನ್ನು ಮೆಚ್ಚಿಸಿಯೇನೆಂಬ ನಂಬುಗೆ ನನಗಿದೆ" ಎಂದನು.

ತಂದೆ ಒಂದು ಕ್ಷಣ ಆಲೋಚಿಸಿ, "ಸರಿ, ಹಾಗೇ ಮಾಡು. ಆದರೆ ಒಂದು ವಿಷಯ ನೆನಪಿಟ್ಟುಕೋ. ಎಷ್ಟೇ ದೊಡ್ಡವರಿಗಾದರೂ ಸರಾಸರಿಯಾಗಿ ರಾಜನ ದರ್ಶನವಾಗಲಾರದು. ಯಾವನಾದರೂ ದೊಡ್ಡವನನ್ನು ಹಿಡಿದು ಆತನ ಮನಸ್ಸನ್ನು ವಶಪಡಿಸಿಕೋ. ನಿನ್ನಿಂದಾಗದೆ ಹೋದಾಗ ನನಗೆ ತಿಳಿಸು." ಎಂದನು.

ವೆಂಕಪ್ಪನು ರಾಜಧಾನೀ ನಗರಕ್ಕೆ ಹೋದನು. ಆದಿನ ಮಹಾರಾಜನು ಮಹಾಕವಿ ಅಪ್ಪಣ್ಣನಿಗೆ ಕನಕಾಭಿಷೇಕ ಮಾಡುವ ಸಡಗರದಲ್ಲಿದ್ದನು. ಜನರು ತಂಡೋಪತಂಡವಾಗಿ ಮಹಾಸಭೆಗೆ ಹೋಗುತ್ತಿದ್ದರು. ವೆಂಕಪ್ಪನೂ ನೋಡಲು ಹೋದನು.

ರಾಜ್ಯದೊಳಗಿರುವ ಪ್ರಮುಖರನೇಕರು ಮಹಾಕವಿಗೆ ಪ್ರಣಾಮ ಮಾಡುವುದನ್ನು ವೆಂಕಪ್ಪನು ನೋಡಿದನು. ರಾಜನು ಸ್ವತಃ ಒಂದು ತಾಂಬಾಣದ ತುಂಬಾ ಬಂಗಾರದ ನಾಣ್ಯಗಳನ್ನು ತಂದು, ಪುರೋಹಿತರು ಮಂತ್ರಪಠನೆ ಮಾಡುತ್ತಿರಲು



ಅಪ್ಪಣ್ಣ ಮಹಾಕವಿಯ ಮೇಲೆ ಅಭಿಷೇಕ ಮಾಡಿದನು. ಅಪ್ಪಣ್ಣ ಮಹಾಕವಿ ಒಂದು ಕವಿತ್ವದ ಮೂಲಕ ರಾಜನಿಗೆ ಆಶೀರ್ವಾದ ಮಾಡಿದನು. ಜಯಜಯಧ್ವಾನಗಳಿಂದ ಸಭೆ ಗದಗದಿಸಿತು.

ಆ ಕವಿಯ ಪುಣ್ಯಕ್ಕೆ ಆಶ್ಚರ್ಯಪಡುತ್ತ ವೆಂಕಪ್ಪನು ಆದಿನ ಸಾಯಂಕಾಲ ಆ ಮಹಾಕವಿಯನ್ನು ನೋಡಲು ಹೋದನು. ಬಹಳ ಸುಲಭದಲ್ಲಿಯೇ ಅಪ್ಪಣ್ಣನ ದರ್ಶನ ಲಭಿಸಿತು. ವೆಂಕಪ್ಪನು ಅವನಿಗೆ ವಿನಯದಿಂದ ನಮಸ್ಕಾರ ಮಾಡಿ, "ನಾನು ಕೂಡಾ ವಿದ್ಯೆಗಳನ್ನು ಕಲಿತು ಪಾಂಡಿತ್ಯ ಸಂಪಾದಿಸಿಕೊಂಡಿದ್ದೇನೆ. ನಿಮ್ಮ ಸಹಾಯದಿಂದ ರಾಜಾಸ್ಥಾನದಲ್ಲಿ ಒಂದು ಉದ್ಯೋಗ ಸಂಪಾದಿಸಬೇಕೆಂದಿದ್ದೇನೆ" ಎಂದನು.

ಅಪ್ಪಣ್ಣ ಆಶ್ಚರ್ಯಪಡುತ್ತ, "ನೀನು ಯಾರೋ ನೋಡಿದರೆ ಚೆನ್ನಾಗಿರುವೆಯಾದರೂ ಮಾತು ಸ್ವಲ್ಪ ಹುಚ್ಚು ಮಂಡೆಯೋ ಎಂದು ಸಂದೇಹಿಸುವ ಹಾಗಿದೆ. ಹಾಗಿಲ್ಲದಿದ್ದರೆ ಆಸ್ಥಾನದ ಉದ್ಯೋಗಕ್ಕಾಗಿ ನನ್ನ ಸಹಾಯ ಕೇಳಲು ಬರಲಾರೆ. ನಿನಗೆ ಅನುಭವ ಇಲ್ಲ." ಎಂದನು.

ವೆಂಕಪ್ಪ ಮೋರೆ ಚಿಕ್ಕದು ಮಾಡಿಕೊಂಡು, "ಎಲ್ಲರೂ ಹೇಳುವ ಹಾಗೆಯೇ ನೀವು ಕೂಡಾ ಹೇಳಿಬಿಟ್ಟಿರಿ. ಮಹಾರಾಜರಿಂದ ಕನಕಾಭಿಷೇಕ ಮಾಡಿಸಿಕೊಂಡ ನಿಮಗಿಂತ ದೊಡ್ಡವರು ನನಗೆಲ್ಲಿ ಸಿಗುತ್ತಾರೆ ?" ಎಂದನು.

ಅಪ್ಪಣ್ಣ ನಕ್ಕು, "ಹುಚ್ಚನೇ ! ಈ ಸಂಗತಿ ಗೊತ್ತಿಲ್ಲವೇ ? ಒಬ್ಬ ಕವಿಯನ್ನು ಸನ್ಮಾನಿಸುವುದರಿಂದ ರಾಜನ ಗೌರವಕ್ಕೆ ಮೆರುಗು ಬರುತ್ತದೆ. ಅದಕ್ಕಾಗಿಯೇ ಅವರು ನನಗೆ ಕನಕಾಭಿಷೇಕ ಮಾಡಿದರು. ಅಷ್ಟೇಹೊರತು ಆತನಿಗೆ ನನ್ನ ಮೇಲೆ ಪ್ರತ್ಯೇಕ ಅಭಿಮಾನವೆಂಬುದೇನೂ ಇಲ್ಲ. ನಿನಗೆ ಉದ್ಯೋಗ ಬೇಕಾದರೆ ಮಂತ್ರಿಯ ಹತ್ತಿರ ಹೋಗು. ಅಥವಾ ಸೇನಾಪತಿಯ ಹತ್ತಿರವೋ, ವಿದೂಷಕನ ಹತ್ತಿರವೋ ಹೋಗಿ ಮಾತಾಡು. ಕಡೆಗೆ ಮಹಾರಾಜರ ಕ್ಷೌರಿಕನೂ, ರಜಕನೂ ಸಹ ನಿನಗೆ ಸಹಾಯ ಮಾಡಬಹುದು. ಈ ಸನ್ಮಾನ ಸಮಾರಂಭವೆಲ್ಲಾ ಮುಗಿದು ನಾನು ಹೊರಟು ಹೋದ ಮೇಲೆ ನಾನು ಯಾರೆಂಬುದು ಕೂಡಾ ರಾಜನು ಮರೆತರೂ ಆಶ್ಚರ್ಯವೇನಿಲ್ಲ" ಎಂದನು.

ಅಪ್ಪಣ್ಣನ ಮಾತು ಕೇಳಿ ವೆಂಕಪ್ಪನಿಗೆ ಇಡಿಯ ಪ್ರಪಂಚವೇ ಅರ್ಥವಾಗದ ಸಮಸ್ಯೆಯಾಗಿ ತೋರಿತು. ಅವನು ತಂದೆಗೆ ಸಮಾಚಾರ ಕಳುಹಿಸಿ, ಆತನ ಮೂಲಕವಾಗಿ ರಾಜನ ಆಸ್ಥಾನದಲ್ಲಿ ಒಂದು ಉದ್ಯೋಗ ಸಂಪಾದಿಸಿಕೊಂಡು, ಅನಾಮಧೇಯನಾಗಿ ನಿಶ್ಚಿಂತೆಯಿಂದ ಅವನ ಪಾಡಿಗೆ ಸುಖವಾಗಿದ್ದನು.






## ೨

[ಶಾಂತಿ ಸಂಪದಗಳಿಂದ ಮೆರೆಯುವ ಮರಾಳ ದ್ವೀಪಕ್ಕೆ ಮಂದರದೇವನು ರಾಜನಾಗಿದ್ದನು. ನೆರೆಯಲ್ಲಿದ್ದ ಕುಂಡಲಿನೀ ದ್ವೀಪದಲ್ಲಿ ಅರಾಜಕವು ಪ್ರಾರಂಭವಾಗಿತ್ತು. ನರವಾಹನ ಮಿಶ್ರನೆಂಬ ಸೇನಾನಿ ಅಲ್ಲಿಯ ಅಧಿಕಾರವನ್ನು ವಶಪಡಿಸಿಕೊಂಡು ಮರಾಳ ದ್ವೀಪವನ್ನೂ ಆಕ್ರಮಿಸಿದನು. ಅವನ ಗೂಢಚಾರರ ಕೈಗೇ ಮಂದರ ದೇವನು ಬಂದಿಯಾಗಿ ಸಿಕ್ಕಿಬಿದ್ದನು.]

**ಶ**ತ್ರು ಸೈನಿಕರು ಮಂದರದೇವನನ್ನು ಎಳೆದುಕೊಂಡು ಹೋಗುತ್ತಿದ್ದಾಗ, ಗುಡುಗು ಸಿಡಿಲುಗಳೊಂದಿಗೆ, ಜಡಿಮಳೆಯೇ ಪ್ರಾರಂಭವಾಯಿತು. ಸಮುದ್ರ ತೀರದಲ್ಲಿದ್ದ ಉದ್ದುದ್ದವಾದ ತೆಂಗಿನ ಮರಗಳೂ, ಚಟುಕಿನ ಮರಗಳೂ ಬಿರುಗಾಳಿಗೆ ಓಲಾಡ ತೊಡಗಿದುವು. ಅವುಗಳ ಸೊಯಿಂ ಸೊಯಿಂ ಶಬ್ದವು ಕಿವಿಗಳನ್ನು ಸೀಳುವಂತಿದ್ದುವು. ಗಾಳಿಯ ರಭಸಕ್ಕೆ ಅಲ್ಲಲ್ಲಿ ಮರಗಳು ಬೇರು ಸಹಿತ ಮಗುಚಿ ಬೀಳುತ್ತಿದ್ದುವು. ಇಂತಹ ಪ್ರಕೃತಿ ವಿರೋಧವನ್ನೂ ಭೇದಿಸಿಕೊಂಡು ಶತ್ರು ಭಟರು ಮಂದರದೇವನನ್ನು ಸಾಗಿಸಿಕೊಂಡು ಹೋಗುತ್ತಿದ್ದರು. ಆ ಸಮಯದಲ್ಲಿ ಜೀವದಾಸೆ ಬಿಟ್ಟು ಸಮುದ್ರದಲ್ಲಿ ಯುದ್ಧಮಾಡುತ್ತಿದ್ದ ಮರಾಳ ಹಾಗು ಕುಂಡಲಿನೀ ದ್ವೀಪರಾಜ್ಯಗಳ ಸೈನಿಕರು ಶತ್ರು ಮಿತ್ರರನ್ನು ತಿಳಿಯದೆ ಚೆಲ್ಲಾಚೆದರಾಗಿ ಹೊಡೆದಾಡುತ್ತಿದ್ದರು. ಹಾಗಿದ್ದರೂ ಕುಂಡಲಿನೀ ಸೈನಿಕರು ಮರಾಳದ ತೀರದಲ್ಲಿಳಿದು ಅಲ್ಲಿರುವ ಮರಾಳ ಸೈನಿಕರೊಂದಿಗೆ ಬಾಹಾಬಾಹೀ ಯುದ್ಧಕ್ಕೆ ತೊಡಗಿದರು. ಪ್ರಕೃತಿಯ ಆರ್ಭಟೆಯನ್ನು ಮೀರಿಸಿಯೇ ಅವರ ಯುದ್ಧದ ಆರ್ಭಟೆ ಕೇಳುತ್ತಿದ್ದಿತು.



ಬಂದಿಯಾಗಿ ಕುದುರೆಯ ಮೇಲೆ ಅತಿ ವೇಗದಲ್ಲಿ ಸಾಗಿಸಲ್ಪಡುವ ಮಂದರ ದೇವನ ಕಿವಿಗಳಿಗೆ ಕುಂಡಲಿನೀ, ಮರಾಳ ಸೈನಿಕರು ಮಾಡುವ ಯುದ್ಧಧ್ವಾನಗಳು ಕೇಳಿಸುತ್ತಲೇ ಇದ್ದರೂ, ಯಾರಿಗೆ ಜಯವಾಗುವುದೆಂಬುವನ್ನು ಕಂಡು ಹಿಡಿಯಲಾಗಲಿಲ್ಲ.

"ಜೈ ಕುಂಡಲಿನೀ!" ಎಂದು ಗರ್ಜಿಸಿಕೊಂಡು ಮುಂದೆ ಮುಂದೆ ನುಗ್ಗಿ ಬರುವ ಮರಾಳ ಸೈನಿಕರನ್ನು "ಜೈ ಮರಾಳೀ!" ಎಂದು ಅಷ್ಟೇ ಜೋರಿನಿಂದ ಕಿವಿಗಳನ್ನು ತೂತುಮಾಡುವಂತೆ ಗರ್ಜಿಸುತ್ತ ಮರಾಳಸೈನಿಕರು ಪ್ರತಿಭಟಿಸುತ್ತಿದ್ದರು. ಆಕಾಶದ ಕಾರ್ಮೋಡಗಳು ಗಾಳಿಯ ವೇಗಕ್ಕೆ ಚೆಲ್ಲಾಚೆದರಾಗುತ್ತಿರಲು ಸಿಡಿಲಿನ ಕಠೋರ ಶಬ್ಧವು ಆಗಾಗ ಭೂಮಿಯನ್ನು ನಡುಗಿ ಸುತ್ತಿದ್ದಿತು. ಒಂದೇ ಸಮನೆ ಜೋರಾಗಿ ಸುರಿಯುವ ಮಳೆ, ಆಗಾಗ ಕಡಮೆಯಾಗಿ ಮತ್ತೆ ಜೋರಾಗುವ ಕ್ರಮಕ್ಕೆ ತಿರುಗಿತ್ತು. ಗಾಳಿಯೂ ಹಾಗೆಯೇ.

"ಹಾ! ಮರಾಳದೇವೀ! ನನ್ನ ರಾಜ್ಯಕ್ಕೂ ನನಗೂ ಇಂದಿಗೆ ಸಂಬಂಧ ತೀರಿಸಿದೆಯಲ್ಲಾ!" ಎಂದು ಮಂದರ ದೇವನು ತನ್ನೊಳಗೇ ಪ್ರಲಾಪಿಸಿಕೊಂಡನು. ಇನ್ನು ಅವನಿಗೆ ತಪ್ಪಿಸಿಕೊಂಡು ಹೋಗುವ ಮಾರ್ಗವೇ ಇಲ್ಲ. ತನಗೆ ಇದಿರುತಿರುಗಿ ದ್ರೋಹಿಗಳಾಗಿ ಹಿಡಿಸಿಕೊಟ್ಟ ತನ್ನ ಅಂಗರಕ್ಷಕರೊಂದಿಗೆ ಹೋರಾಡಲಿಕ್ಕಾದರೂ ಅವನಲ್ಲಿ ಯಾವ ಆಯುಧವೂ ಇಲ್ಲದಂತಾಗಿದೆ. ಇಂತಹ ಆಪತ್ತಿನಿಂದ ಇನ್ನು ಪಾರಾಗುವುದು ಸುಳ್ಳೆಂದು ಅವನು ನಿರಾಶನಾಗಿದ್ದಾಗ. ಸಮೀಪದಲ್ಲಿಯೇ ಕೇಳಿಸಿದ "ಜೈ ಮರಾಳೀ!" ಎಂಬ ಸಿಂಹನಾದವು ಅವನಿಗೆ ಆಶ್ಚರ್ಯವನ್ನುಂಟು ಮಾಡಿತು. ಅದು ಹೊಸತಾಗಿ ಬಂದವರಿಂದ ಹೊರಟ ಶಬ್ಧ.

ಹಾಗೆ ಸಿಂಹನಾದಮಾಡಿದವರು. ಕೋಟೆಯೊಳಗಿನಿಂದ ಮಂತ್ರಿ ಕಳುಹಿಸಿದ ಪ್ರತ್ಯೇಕ ವೀರರಾಗಿದ್ದರು. ಅವರು ಮಂದರದೇವನ ರಕ್ಷಣೆಗಾಗಿಯೇ ಬರುತ್ತಿದ್ದರು. ಕುದುರೆಗಳನ್ನು ಅತಿವೇಗವಾಗಿ ಓಡಿಸಿಕೊಂಡು ಕ್ಷಣೇ ಕ್ಷಣೇ ಸಮೀಪಿಸಿಕೊಂಡಿದ್ದರು. ತನಗೆ ಸಾಧಕವಾದ ಆ ನಿನಾದವನ್ನು ಕೇಳಿ ಮಂದರದೇವನು ಹಿಂದಿರುಗಿ ನೋಡಿದನು. ಅದೇಕ್ಷಣದಲ್ಲಿ ಕಣ್ಣು ಕೋರೈಸಿ ಕತ್ತಲೆಕವಿಸುವ ಕಾಂತಿಯಿಂದ, ಲಟಲಟನೆ ಕಿವಿಗಳು ಒಡೆಯುವಂತೆ ಬರಸಿಡಿಲೊಂದು ಭಯಂಕರ ಧ್ವನಿಯಿಂದ ಹೊಡೆಯಿತು. ಆ ಕಾಂತಿಗೆ ಮಂದರದೇವನು ಗಟ್ಟಿಯಾಗಿ ಕಣ್ಣುಗಳನ್ನು ಮುಚ್ಚಿ ಕುಲದೇವಿಯನ್ನು ಸ್ಮರಿಸಿದನು.

ಮಂದರದೇವನು ಕಣ್ಣು ತೆರೆಯುವಷ್ಟರಲ್ಲಿ ದ್ರೋಹಿಗಳಾದ ಇಬ್ಬರು ಅಂಗರಕ್ಷರೂ ನೆಲದಲ್ಲಿ ಬಿದ್ದು ನರಳುತ್ತಿದ್ದರು. ಅವರು ಕುಳಿತುಕೊಂಡಿದ್ದ ಕುದುರೆಗಳಲ್ಲಿ ಒಂದು ಮರಣ ಯಾತನೆಯಿಂದ ಚಡಪಡಿಸುತ್ತಿದ್ದಿತು. ಎರಡನೆಯ 'ಕುದುರೆ ಹುಚ್ಚು ಹಿಡಿದಂತೆ ಸವಾರನನ್ನು ಕೆಡವಿ ಓಡುತ್ತಿದ್ದಿತು.

ಬರಸಿಡಿಲು ಅವರ ಮೇಲೆಯೇ ಬಡೆಯಿತೆಂದು ಮಂದರದೇವನು ತಿಳಿದು ಸ್ತಂಭೀಭೂತನಾದನು.

ಮಂದರದೇವನು ತಟಕ್ಕನೆ ಕುದುರೆಯಿಂದ ಕೆಳಗೆ ಹಾರಿದನು. ಅದೇ ಸಮಯದಲ್ಲಿ ಅವನ ರಕ್ಷಣೆಗಾಗಿ ಧಾವಿಸಿಬರುವ ನಾಲ್ವರೂ ತೀರ ಹತ್ತಿರಕ್ಕೆ ಬಂದರು. ಅವರೊಂದಿಗೆ ಮಂದರದೇವನು ಸಿಡಿಲಿ ನೇಟಿಗೆ ಬಿದ್ದ ಆ ದ್ರೋಹಿ ಅಂಗರಕ್ಷಕರ ಬಳಿಗೆ ಹೋದನು. ಅಲುಗದೆ ಬಿದ್ದಿರುವವರಲ್ಲಿ ಜೀವ ವಿದೆಯೋ ಇಲ್ಲವೋ ಎಂದು ಪರೀಕ್ಷಿಸಿ ನೋಡಿದನು.

ಒಬ್ಬನಂತೂ ಆಗಲೇ ಸತ್ತಿದ್ದನು. ಸಾಯುವ ಸ್ಥಿತಿಯಲ್ಲಿದ್ದ ಇನ್ನೊಬ್ಬನು ಮಂದರದೇವನ ಕಡೆಗೆ ಕೈಯೆತ್ತಿ ಸಮೀಪಬರುವಂತೆ ಸಂಜ್ಞೆಮಾಡುತ್ತಿದ್ದನು. ಮಂದರದೇವನು ಅವನ ಹತ್ತಿರಹೋಗಿ ಕುಳಿತನು. ಆತನು ಮರಣವೇದನೆಯಿಂದ ಬಿಕ್ಕುತ್ತ. "ಮಹಾ ರಾಜರೇ, ನಾವಿಬ್ಬರೂ ನಿಮಗೆ ದ್ರೋಹಮಾಡಿ ದೆವು. ಈ ನೀಚಕಾರ್ಯಕ್ಕೆ ನಾವು ತಲೆಹಾಕಿದ್ದು ಧನದ ಆಸೆಗಾಗಿ ಅಲ. ತನಗೆ ಸಹಾಯಮಾಡದೇ ಹೋದರೆ ನಮ್ಮ ಕುಟುಂಬವನ್ನೇ ಸರ್ವನಾಶ ಮಾಡುವೆನೆಂದು ಆ ನೀಚ, ನರವಾಹನ ಮಿಶ್ರ ನಮಗೆ ವರ್ತಮಾನ ಕಳಿಸಿದ್ದ. ನಾವು ಕುಂಡಲಿನೀ ದ್ವೀಪದವರೆಂಬುದು ನಿಮಗೆ ಗೊತ್ತಿದೆಯಷ್ಟೆ? ನಮ್ಮ ದ್ರೋಹಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ದೇವರೇ ಕೊಟ್ಟನು. ಆದರೆ ನಿಮಗೆಮಾಡಿದ ದ್ರೋಹಕ್ಕೆ ಪರಿಹಾರವಾಗಿ ಒಂದು ಮಾತು ಹೇಳುತ್ತೇನೆ. ಅದಕ್ಕೇ ಇನ್ನೂ ಪ್ರಾಣ ಉಳಿದಿದೆ.

ನೀವು ಯಾವಕಾರಣ ದಿಂದಾದರೂ ಈ ದ್ವೀಪ ವನ್ನು ಬಿಡುವಾಗ, ಇಲ್ಲಿಗೆ ನೇರಾಗಿ ಕಾಣುವ ಆ ತೆಂಗಿನ ತೋಪುಗಳಾಚೆಗೆ ತೀರಕ್ಕೆ ಆತುಕೊಂಡು ಎರಡು ದೋಣಿಗಳಿವೆ ! ಅದರಲ್ಲಿ ತಪ್ಪಿಸಿಕೊಳ್ಳಿರಿ ಪ್ರಭೂ !" ಎನ್ನುವಷ್ಟರಲ್ಲೇ ಅವನ ಪ್ರಾಣ ಪಕ್ಷಿ ಹಾರಿ ಹೋಯಿತು.

ಮಂದರದೇವನು ಎದ್ದುನಿಂತು ತನ್ನ ಕೋಟೆಯ ಕಡೆಗೆ ಪರೀಕ್ಷಿಸಿ ನೋಡಿದನು. ಕೋಟೆಯ ಬುರುಜು ಗಳ ಮೇಲಿನಿಂದ ಸೈನಿಕರು ಮೇಲಿಂದ ಮೇಲೆ





ಬಾಣಗಳನ್ನು ಬಿಟ್ಟುಕೊಂಡೇ ಇದ್ದರು. ಕೆಲವರು ದೊಡ್ಡದೊಡ್ಡ ಗುಂಡುಕಲ್ಲುಗಳನ್ನು ಕೆಳಕ್ಕೆ ಹೊರಳಿಸುತ್ತಿದ್ದರು. ಕುಂಡಲಿನೀ ಸೈನಿಕರು ಏಣಿಗಳಮೂಲಕ ಕೋಟೆಗೋಡೆಯ ಮೇಲೆ ಲಗ್ಗೆಹತ್ತಲು ಪ್ರಯತ್ನ ಮಾಡುತ್ತಿದ್ದರು. ಮೇಲಿನಿಂದ ಬೀಳುವ ಕುದಿ ಕುದಿ ಎಣ್ಣೆಯೂ, ಬೆಂಕಿ ದೊಂದಿಗಳೂ ಅವರ ಪ್ರಯತ್ನವನ್ನು ಭಗ್ನಗೊಳಿಸುತ್ತಿದ್ದುವು. ಆದರೂ ಶತ್ರುಗಳು ಲಗ್ಗೆ ಹತ್ತುತ್ತಲೇ ಇದ್ದರು.

ಅಲ್ಲಿಯ ಪರಿಸ್ಥಿತಿಯನ್ನು ಗಮನಿಸಿದಾಗ ಕೋಟೆ ಶತ್ರುಗಳ ಕೈಸೇರುವುದು ಖಂಡಿತವೆಂದು ಮಂದರದೇವನಿಗೆ ತಿಳಿಯಿತು. ಇಂತಹ ತುಫಾನಿನ ಸಮಯದಲ್ಲಿಯೂ ಕುಂಡಲಿನೀ ಸೈನಿಕರು ಇಷ್ಟರ ಮಟ್ಟಿಗೆ ಮುಂದುವರಿದಿದ್ದಾರೆ. ತಾನು ಈಗ ಶತ್ರು ಸೈನಿಕರ ಹಿಂದಿನ ಭಾಗದಲ್ಲಿರುವವನು. ಕೇವಲ ಈ ನಾಲ್ವರು ಸೈನಿಕರೊಂದಿಗೆ ಹುಚ್ಚು ಆವೇಶದಿಂದ ಅವರನ್ನು ಹೊಡೆಯಲು ಓಡುವುದೆಂದರೆ ಆತ್ಮಹತ್ಯಮಾಡಿಕೊಳ್ಳುವುದಕ್ಕೆ ಸಮಾನವೇಸರಿ! ತಪ್ಪಿಸಿಕೊಂಡು ಸಮಯ ಸಾಧಿಸಿಕೊಳ್ಳುವುದೇ ಪ್ರಕೃತೋಚಿತ.

ಮಂದರದೇವನು ಹೀಗೆ ಯೋಚಿಸುತ್ತಿರಲು, ಅಗ್ನಿಪರ್ವತವು ಸಿಡಿದಹಾಗೆ ಭಯಂಕರ ಶಬ್ದ ಕೇಳಿಸಿತು. ನಿರ್ವಿಣ್ಣನಾಗಿ ಮಂದರದೇವನು ಕೋಟೆಯನ್ನು ನೋಡಿದನು. ಕೋಟೆಯ ಬುರುಜಿನ ಬುಡದಲ್ಲಿಯ ದೊಡ್ಡದೊಂದು ಭಾಗವೇ ಪುಡಿಪುಡಿಯಾಗಿ ಆಕಾಶಕ್ಕೆ ಹಾರಿ ನೆಲಕ್ಕೆ ಬೀಳುವುದನ್ನು ನೋಡಿದನು. ಆ ಭಾಗವಷ್ಟೂ ನೆಲಕ್ಕೆ ಜರಿದು ಬಿದ್ದಿತ್ತು! ಸೈನಿಕರ ಹಾಹಾಕಾರಗಳೂ, ಜಯಘೋಷಗಳೂ ಆಕಾಶಕ್ಕೇರುತ್ತಿದ್ದುವು. ಅವರಿಗೀಗ ಕೋಟೆ ತೆರೆದ ಬಾಗಿಲೇ ಆಯಿತು.

"ಆಯಿತು! ಸರ್ವವೂ ನಾಶವಾಯಿತು! ಕುಂಡಲಿನೀ ಸೈನಿಕರು ಮದ್ದುಗುಂಡು ತುಂಬಿಸಿ ಕೋಟೆಗೋಡೆಯನ್ನು ಕೆಡವಿದರು. ನಾವು ಕ್ಷಣದಲ್ಲಿ ಸೋತಹಾಗೆಯೇ! ಇನ್ನು ಸ್ವಲ್ಪವೂ ಆಶೆಯಿಲ್ಲ. ವಿಶ್ವಾಸದ ಮಂತ್ರಿ ಮುಂತಾದವರ ಗತಿ ಏನಾಗುವುದೋ!" ಎಂದು ಮಂದರದೇವನು ಬಾಯಿಬಿಟ್ಟೇ ಹೇಳಿಕೊಂಡನು.

"ಹೌದು ಮಹಾರಾಜರೇ! ಬಹಳ ಘೋರವೇ ಆಯಿತು." ಎಂದು ಪಕ್ಕದಲ್ಲಿದ್ದ ಆ ನಾಲ್ವರು ಸೈನಿಕರೂ ತಲೆತಗ್ಗಿಸಿದರು.

ಇನ್ನು ತಾನು ಮರಾಳದ್ವೀಪವನ್ನು ಬಿಡಲೇಬೇಕು. ಒಂದುಸಾರಿ ಶತ್ರುವಿನಿಂದ ಕೋಟೆ ಭೇದಿಸಲ್ಪಟ್ಟಿತೆಂದರೆ ಆ ಮೇಲೆ ಅದನ್ನು ಅವರು ವಶಪಡಿಸಿಕೊಂಡ ಹಾಗೆಯೇ ಆಯಿತು. ಆ ಕೆಲಸದ ಗಡಿಬಿಡಿ ಮುಗಿದಕೂಡಲೆ ಶತ್ರುಗಳು ತನ್ನನ್ನು ಹುಡುಕುವುದು ಖಂಡಿತ. ತಾನು ಖೈದಿಯಾಗಿ ಸಿಕ್ಕಿಬಿದ್ದರೆ, ಚಿತ್ರಹಿಂಸೆಗೆ ಗುರಿಯಾಗದೆ ಹೋದರೂ, ಆ ಕ್ರೂರ ನರವಾಹನಮಿಶ್ರನ ಕೈಯಲ್ಲಿ ಅವಮಾನವಂತೂ ನಿಜ. ಅದಕ್ಕಿಂತ ಸಮುದ್ರದಲ್ಲಿ ಮುಳುಗಿ

ಸಾಯುವುದೇ ಮೇಲು! ಮನುಷ್ಯನಿಗೆ ಅವಮಾನಕ್ಕಿಂತ, ಹೆಚ್ಚಿನ ಶಿಕ್ಷೆ ಬೇರೆ ಏನಿದೆ ?

"ನಡೆಯಿರಿ. ಈ ದ್ರೋಹಿ ಹೇಳಿದ ದೋಣಿಯ ವಿಷಯ ನೋಡೋಣ. ಸುಳ್ಳು ಹೇಳಿರಲಾರನು. ಮರಾಳದೇವಿಯ ಕರುಣವಿದ್ದರೆ, ನಾವು ಸುರಕ್ಷಿತ ವಾಗಿ ಇನ್ನೆಲ್ಲಿಯಾದರೂ ತೀರ ಸೇರಬಹುದು. ಆ ದೇವಿಯ ಸಹಾಯದಿಂದಲೇ ನಮ್ಮ ರಾಜ್ಯವನ್ನು ಮತ್ತೆ ಜಯಿಸಲೂ ಸಾಧ್ಯವಾದೀತು! ದುಷ್ಟತನಕ್ಕೆ ಎಂದಿಗೂ ಚಿರಾಯುಷ್ಯವಿರಲು ಸಾಧ್ಯವಿಲ್ಲ. ಈಗ ಧೈರ್ಯವೇ ನಮಗೆ ಜತೆ!" ಎಂದನು ಮಂದರದೇವ.

ಸೈನಿಕರು ಚಿಂತೆಯ ನೋಟದಿಂದ ಕೋಟೆಯ ಕಡೆಗೆ ನೋಡಿದರು. ಕೋಟೆಯ ಬುರುಜಿನ ಮೇಲಿನಿಂದ ಮರಾಳ ಸೈನಿಕರ ಯಾವ ಪ್ರತಿಭಟನೆಯೂ ಕಾಣಲಿಲ್ಲ. ಕುಂಡಲಿನೀ ಸೈನಿಕರು ನಿಚ್ಚಣಿಕೆಗಳ ಸಹಾಯದಿಂದ ನಿರ್ಭಯ, ನಿರಾತಂಕವಾಗಿ ಕೋಟೆಯ ಗೋಡೆಯನ್ನು ಏರಿಕೊಂಡಿದ್ದರು. ಅವರನ್ನು ತಡೆಯುವವರೇ ಇಲ್ಲ. ಕೆಲವರು ಕುಂಡಲಿನೀ ಧ್ವಜವನ್ನು ಎತ್ತರವಾದ ಬುರುಜಿನ ಮೇಲೆ ಏರಿಸುವ ಕಾರ್ಯದಲ್ಲಿರುವುದೂ ಕಂಡಿತು.

ಮಂದರದೇವನು ದೀರ್ಘವಾದೊಂದು ಶ್ವಾಸವನ್ನು ಬಿಟ್ಟು ಮುಂದಕ್ಕೆ ನಡೆದನು. ತಮ್ಮ ರಾಜನು ನಿರಾಯುಧನಾಗಿರುವುದನ್ನು ನೋಡಿ ಒಬ್ಬ ಸೈನಿಕನು ಸತ್ತು ಬಿದ್ದ ಅಂಗರಕ್ಷಕರ ಒಂದು ಕತ್ತಿಯನ್ನು ತೆಗೆದು ರಾಜನಿಗೆ ಕೊಟ್ಟನು. ಎಲ್ಲರೂ ಸಮುದ್ರ ತೀರದಲ್ಲಿ ಕಾಣುವ ತೆಂಗಿನತೋಪಿನ ಕಡೆಗೆ ನಡೆದರು. ಗುಡುಗೂ ಮಿಂಚೂ ಗಾಳಿಮಳೆಯೂ ಇನ್ನೂ ಬರುತ್ತಲೇ ಇದ್ದುವು. ಆದರೆ ಸಮುದ್ರದ ಅಬ್ಬರ ಬಹಳ ಮಟ್ಟಿಗೆ ತಗ್ಗಿದ್ದಿತು.

ನಿರಾಶೆ ನಿರುತ್ಸಾಹಗಳಿಂದ ಕುಂದಿಹೋಗಿ ಮೌನವಾಗಿ ನಡೆಯುವವರ ಕಿವಿಗಳಿಗೆ, ತಮ್ಮ ಹಿಂದೆ ತುಸು ದೂರದಲ್ಲಿ ಏನೋ ಕೋಲಾಹಲ ಕೇಳಿಬರಲು



ಅವರು ಹಿಂದಿರುಗಿ ನೋಡಿದರು. ಕೋಟೆಯ ಕಡೆಯಿಂದ ಅವರ ಕಡೆಗೇ ಧಾವಿಸಿಬರುತ್ತಿದ್ದರು ಕೆಲವು ಮಂದಿ ಅಶ್ವೀಕ ವೀರರು! ಅವರು ಯಾರಾಗಿರಬಹುದೆಂದು ಒಂದು ಕ್ಷಣ ನಿಂತು ನೋಡಿದನು ಮಂದರದೇವ.

ಮಂದರದೇವನು ದೊಡ್ಡ ದನಿಯಿಂದ, "ಆಹೋ ಹೋ! ಅವರು ಕುಂಡಲಿನೀ ಸೈನಿಕರೇ! ನಮ್ಮನ್ನು ಹಿಡಿದು ಬಂಧಿಸಲಿಕ್ಕೇ ಬರುತ್ತಿದ್ದಾರೆ! ಈ ಮೈದಾನ ಪ್ರದೇಶದಲ್ಲಿ ಅಶ್ವಿಕರನ್ನು ಇದಿರಿಸುವುದು ಅಪಾಯಕರವೇ. ಬೇಗನೇ ಆ ತೆಂಗಿನತೋಪನ್ನು ತಲಪಿಬಿಡಬೇಕು" ಎಂದು ಆ ಕಡೆಗೆ ಓಡತೊಡಗಿದನು. ಸೈನಿಕರು ಕೂಡಾ ರಾಜನನ್ನು ಬೆಂಬತ್ತಿ ಓಡಿದರು. ಎಲ್ಲರೂ ತೆಂಗಿನತೋಪನ್ನು ಸೇರಿ ಮರಗಳಹಿಂದೆ ಹೊಂಚಿ ಕುಳಿತರು. ನಿಮಿಷ ಮಾತ್ರದೊಳಗೆ ಆ ಸ್ಥಳದಲ್ಲಿ ಯಾರೂ ಇಲ್ಲವೇನೋ ಎಂಬಂತೆ ನಿರ್ಜನವಾಯಿತು!



ಶತ್ರು ಸೈನಿಕರು ಆ ತೋಪಿನ ಕಡೆಗೇ ವಾಯುವೇಗದಿಂದ ಬರುತ್ತಿದ್ದರು. ಮಂದರದೇವನು ಬಿಚ್ಚುಗತ್ತಿಯನ್ನು ಸಿದ್ಧಪಡಿಸಿಕೊಂಡು ಸಮೀಪದಲ್ಲೇ ಕಾಣುವ ಸಮುದ್ರವನ್ನು ನೋಡಿದನು. ದ್ರೋಹಿಯಾದ ಅಂಗರಕ್ಷಕನು ಸಾಯುವ ಮೊದಲು ಹೇಳಿದಂತೆ ಅಲ್ಲಿ ಎರಡು ದೋಣಿಗಳಿರುವುದು ಕಾಣುತಿತ್ತು. ಒಮ್ಮೆಗೇ ಓಡಿಹೋಗಿ ಆ ದೋಣಿಗಳನ್ನೇರಿಕೊಂಡು ಸಮುದ್ರಮಾರ್ಗವನ್ನು ಹಿಡಿಯುವುದು ಕ್ಷೇಮವೇನೋ ಎಂದು ಒಮ್ಮೆ ಅನಿಸಿತು. ಆದರೆ ಎರಡನೇ ದಿಕ್ಕಿಗೆ ನೋಡಿದಾಗ ಶತ್ರುಗಳಾದ ಅಶ್ವಿಕರು ಹದಿನೈದು ಮಂದಿಗಳು ಕಂಡುಬಂದರು. ದೃಢಗಾತ್ರರಾದ ಅವರು ತಳತಳಿಸುವ ಕತ್ತಿಗಳನ್ನು ಝಳಪಿಸಿಕೊಂಡು ಓಡಿ ಬರುತ್ತಿದ್ದಾರೆ. ಅವರನ್ನು ಇದಿರಿಸದೆ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲದಂತಹ ಪರಿಸ್ಥಿತಿ !

"ವಿಜಯವೋ! ವೀರ ಸ್ವರ್ಗವೋ! ಬೇರೆ ಮಾರ್ಗವೇನಿಲ್ಲ" ಎನ್ನುತ್ತ ಮಂದರದೇವನು ಕತ್ತಿ ಝಳಿಪಿಸುತ್ತ ತನ್ನ ಸೈನಿಕರಿಗೂ ಎಚ್ಚರಿಕೆ ಕೊಟ್ಟನು. ಅವರು ಕೂಡಾ ಬಿಚ್ಚುಗತ್ತಿಗಳೊಂದಿಗೆ ಅಡಗಿ ನಿಂತಿದ್ದರು.

ಹೀಗೆ ಇವರು ಯಾವ ಮರದ ಹಿಂದೆ ಇರುವರೆಂಬುದು ತಿಳಿಯದ ಕುಂಡಲಿನೀ ಅಶ್ವಿಕರು ತಮ್ಮ ಕುದುರೆಗಳೊಂದಿಗೆ ಮರಗಳ ನಡುವಿಗೆ ಬಂದೇಬಿಟ್ಟರು. "ಜೈ ಮರಾಳೀ!" ಎಂದು ಕೂಗಿ, ಮಂದರದೇವನು ಹೆಬ್ಬುಲಿಯ ಹಾಗೆ ಹಾರಿ ಒಬ್ಬ ಶತ್ರು ಸೈನಿಕನ ಕಂಠವನ್ನು ಕಡಿದು ಹಾಕಿದನು.

ಒಮ್ಮೆಗೇ ಹೊರಟ ಮಂದರದೇವನ ಸಿಂಹಗರ್ಜನೆಯಿಂದ ಕುಂಡಲಿನೀ ಅಶ್ವಿಕರು ತತ್ತರಿಸಿದರು. ಮರಗಳ ಮಧ್ಯದ ಇಕ್ಕಟ್ಟಾದ ಜಾಗದಲ್ಲಿ ಸಿಕ್ಕಿಕೊಂಡ ಕುದುರೆಗಳನ್ನು ಎತ್ತ ತಿರುಗಿಸಲಿಕ್ಕೂ ಸಾಧ್ಯವಾಗದೆ ಅವರು ತಬ್ಬಿಬ್ಬಾದರು. ಅದೇ ಸಂಧಿ ಸಾಧಿಸಿ ಮಂದರದೇವನೂ, ಅವನ ಸೈನಿಕರೂ ಅಶ್ವಿಕರಲ್ಲಿ ಒಬ್ಬೊಬ್ಬನನ್ನೇ ತಮ್ಮ ಹರಿತಕತ್ತಿಗಳಿಂದ ಹೊಡೆಯ ತೊಡಗಿದರು. ಅಶ್ವಿಕರಲ್ಲಿ ನಾಲ್ಕೈದುಮಂದಿ ನೆಲಕ್ಕುರುಳಿದಕೂಡಲೇ, ಹೀಗೆ ಪ್ರಯೋಜನವಿಲ್ಲವೆಂದುಕೊಂಡು ಎಲ್ಲರೂ ಕುದುರೆಯಿಂದ ಕೆಳಗಿಳಿದು ಮಂದರದೇವನನ್ನೂ ಅವನ ಸೈನಿಕರನ್ನೂ ಇದಿರಿಸಿದರು. ತೆಂಗಿನ ಮರಗಳ ನಡುವೆ ಬಾಹಾಬಾಹೀ ಯುದ್ಧವು ಪ್ರಾರಂಭವಾಯಿತು. ಆ ಸಂಕುಲಸಮರದಲ್ಲಿ ಕತ್ತಿಯ ಪೆಟ್ಟುಗಳು ಶತ್ರುಗಳಿಗೂ, ಅವರ ಕುದುರೆಗಳಿಗೂ ತಗಲಿದುವು. ಕೆಲವು ಪೆಟ್ಟುಗಳು ಗುರಿತಪ್ಪಿ ಮರಗಳ ಕಾಂಡಗಳಿಗೆ ಬೀಳುತ್ತಿದ್ದುವು.

ಇಂತಹ ಹೋರಾಟವು ಒಂದು ಗಂಟೆಯ ವರೆಗೆ ನಡೆಯುತ್ತಿರಲು ಕುಂಡಲಿನೀ ಸೈನಿಕರೊಳಗಿನ, ಅನೇಕರು ಸತ್ತು ಸುಮ್ಮನಾದರು. ಮರಗಳ ಮರೆಯಲ್ಲಿ ತಪ್ಪಿಸಿಕೊಂಡು ಅಡಗುತ್ತಾ ಯುದ್ಧ ಮಾಡುವ ಮಂದರದೇವನೂ, ಅವನ ಸೈನಿಕರೂ ಅನೇಕಮಂದಿ ಶತ್ರುಗಳನ್ನು ಕೊಂದು ಹಾಕಿದರು.

ಅಲ್ಲಿಗೆ ಬಂದಿದ್ದ ಹದಿನೈದು ಮಂದಿ ಕುಂಡಲಿನೀ ಸೈನಿಕರಲ್ಲಿ ಅಧಿಕ ಭಾಗದವರು ಸಾಯುವುದೋ ಗಾಯಗೊಂಡು ಬಿದ್ದು ನರಳುವುದೋ ಪ್ರಾರಂಭ ವಾದುದನ್ನು ನೋಡಿ, ಉಳಿದವರ ಧೈರ್ಯವೆಲ್ಲ ಕುಂಠಿಸಿಹೋಯಿತು. ಮತ್ತೇನಿದೆ? ಅಳಿದುಳಿದ ಶತ್ರುಗಳು ಹಿಂದಿರುಗಿ ಓಡ ತೊಡಗಿದರು. ಮಂದರ ದೇವನ ಸೈನಿಕರು ಓಡುವವರನ್ನು ಬೆಂಬತ್ತಿ, ಹೊಡೆದು ಅಳವಿಗೆ ಸಿಕ್ಕಿದ ಮತ್ತೆ ಕೆಲವರನ್ನು ಕೊಂದರು.

ಸ್ವಲ್ಪ ಹೊತ್ತಿಗೆ ಅಲ್ಲಿ ಎದ್ದ ಶಬ್ದಗಳೆಲ್ಲಾ ಅಡಗಿತು. ಆಕಾಶದಿಂದ ಆಗಾಗ ಹೊರಡುವ ಗುಡುಗಿನ ದನಿಯು ಹೊರತು ಬೇರೆ ಶಬ್ದಗಳೇನೂ ಕೇಳಲಿಲ್ಲ. ಸೋತು ಓಡುತ್ತಿರುವ ಸೈನಿಕರು ತಮ್ಮ ಕುದುರೆ ಗಳನ್ನು ಆ ತೆಂಗಿನತೋಪಿನಲ್ಲಿ ಯೇ ಬಿಟ್ಟು ಕೋಟೆಯ ಕಡೆಗೆ ಓಡಿ ಹೋಗಿದ್ದರು. ಅಷ್ಟು ಹೊತ್ತಿಗೆ ಕೋಟೆ ಕುಂಡಲಿನೀ ದ್ವೀಪವಾಸಿಗಳಿಗೆ ವಶವಾಗಿ ಹೋಗಿತ್ತು. ರಾಜಪ್ರಾಸಾದ ಪ್ರಾಂತದಲ್ಲಿ ಮಾತ್ರ ಇನ್ನೂ ಕೆಲ ಮಂದಿ ಸ್ವಾಮಿ ಭಕ್ತರಾದ ಮರಾಳ ಸೈನಿಕರು ಅಟ್ಟಹಾಸ ಮಾಡಿಕೊಂಡಿದ್ದರು.

ಮಂದರದೇವನಿಗೂ ಅವನ ಸೈನಿಕರಿಗೂ ಅಲ್ಪ ಸ್ವಲ್ಪ ಗಾಯಗಳಷ್ಟೇ ಆಗಿದ್ದುವು. ಆದರೆ ಎಲ್ಲರೂ ತುಂಬಾ ಬಳಲಿ ಬಸವಳಿದು ಹೋಗಿದ್ದರು.

ಮಂದರದೇವನು ಕತ್ತಿಯನ್ನು ಒರೆಯೊಳಗೆ ಸೇರಿಸಿ, "ಇನ್ನು ನಾವು ಇಲ್ಲಿ ತಡಮಾಡುವುದು ಕ್ಷೇಮವಲ್ಲ. ಕೆಲವರು ತಪ್ಪಿಸಿಕೊಂಡು ಓಡಿದ ವರಿದ್ದಾರೆ. ಅವರಿಂದ ಮತ್ತಷ್ಟು ಶತ್ರುಗಳು ಇಲ್ಲಿಗೆ ಬರುವುದರೊಳಗೆ ನಾವು ಪಲಾಯನ ಮಾಡಬೇಕು" ಎನ್ನುತ್ತ ಹತ್ತಿರದಲ್ಲಿರುವ ದೋಣಿಗಳ ಕಡೆಗೆ ಬೇಗ ಬೇಗನೇ ಹೋದನು. ನಾಲ್ವರು ಸೈನಿಕರೂ ಒಮ್ಮೆ ಮಾತ್ರ ಕೋಟೆಯ ಕಡೆಗೆ ನೋಡಿ, ಅಲ್ಲಿರುವ ಮಂತ್ರಿ ಮುಂತಾದವರ ಗತಿ ಏನಾಯಿತೋ ಎಂದು ಚಿಂತಿಸುತ್ತ, ತಮ್ಮ ಒಡೆಯನನ್ನು ಅನುಸರಿಸಿದರು.

ದ್ರೋಹಿ ಅಂಗರಕ್ಷಕನು ಹೇಳಿದಂತೆ, ಆ ಸಮುದ್ರ ತೀರದಲ್ಲಿ ಎರಡು ದೋಣಿಗಳೇನೋ ಇದ್ದುವಾದರೂ ಅವು ಸಮುದ್ರದಲ್ಲಿ ದೂರಪ್ರಯಾಣಕ್ಕೆ ಉಪಯೋಗ ವಾಗುವಂಥವೇ ಅಲ್ಲ. ಚಿಕ್ಕದಾದ ಸಾಧಾರಣ, ದೋಣಿಗಳು. ತೆರೆಚಾಪೆಗಳ ಸಾಧನಗಳ ಒಂದಿಗೆ ಅದರಲ್ಲಿ ಪ್ರಯಾಣಿಸುವಂತಿಲ್ಲ. ಹುಟ್ಟುಗಳನ್ನು ತೊಳಸಿಕೊಂಡೇ ಅವುಗಳನ್ನು ನಡೆಸಬೇಕಾಗಿದೆ.

ಮಂದರದೇವನು ಆ ದೋಣಿಗಳನ್ನು ಪರೀಕ್ಷಿಸಿ, ಥಕ್ಕನೆ ಏನೋ ಆಲೋಚನೆಬಂದವನಂತೆ "ಹೋ!" ಎಂದು ಉದ್ಗಾರ ತೆಗೆದು ಸೈನಿಕರ ಕಡೆಗೆ ಚಿಂತಿಸು ವವನಂತೆ ನೋಡಿದನು. ಒಡೆಯನ ಚಿಂತೆಗೆ ಕಾರಣ ತಿಳಿಯದೆ ಸೈನಿಕರೂ ಬೆರಗಾದರು.—(ಇನ್ನೂ ಇದೆ)





# ಜತ್ತದಮುನಿ

ಅಪ್ರತಿಹತ ಮೇಧಾವಿಯಾದ ತ್ರಿವಿಕ್ರಮ ಮಹಾರಾಜನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೇರಿಸಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈರಾಜನೇ, ನೀನು ಯಾರ ದಾಕ್ಷಿಣ್ಯಕ್ಕೋ ಒಳಗಾಗಿ ಹೀಗೆ ನನ್ನನ್ನು ಹೊತ್ತು ತಿರುಗುವ ಕೆಲಸ ಮಾಡುವಿಯೇನೋ ಎಂದು ಸಂದೇಹವಾಗಿದೆ. ಇಂತಹ ದಾಕ್ಷಿಣ್ಯಕ್ಕೆ ಹೋಗಿ ತನ್ನ ಮೇಲೆ ಅಭಿಮಾನವಿರಿಸಿಕೊಂಡಿದ್ದ ಇಬ್ಬರೊಳಗಿನ ಸಣ್ಣ ತಕರಾರನ್ನು ಕೂಡ ತೀರಿಸಲಾಗದೆ ಪತ್ತೆಯಿಲ್ಲದೆ ಹೋದವನೊಬ್ಬನ ಕಥೆ ನೆನಪಾಗುತ್ತದೆ. ನಿನಗೆ ದಾರಿಯ ಶ್ರಮ ತಿಳಿಯದಿರಲು ಆ ಕಥೆಯನ್ನು ಹೇಳುತ್ತೇನೆ, ಕೇಳುತ್ತಾ ನಡೆ." ಎಂದು ಈ ರೀತಿಯಾಗಿ ಕಥೆಯನ್ನು ಪ್ರಾರಂಭಿಸಿತು :

ಅನೇಕ ವರ್ಷಗಳ ಹಿಂದೆ ಚಂಪಕವೆಂಬ ದೇಶವನ್ನು ಧೀರಮಲ್ಲನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನಿಗೆ ವೀರಮಲ್ಲ, ಶೂರಮಲ್ಲ, ಗುಣಮಲ್ಲ

## ಬೇತಾಳಕಥೆಗಳು



ಎಂಬ ಮೂವರು ಕುಮಾರರಿದ್ದರು. ಅವರೊಳಗೆ ಕಿರಿಯುವನಾದ ಗುಣಮಲ್ಲನಿಗೆ ಎಲ್ಲಕ್ಕಿಂತ ಹೆಚ್ಚಾಗಿ ಆಧ್ಯಾತ್ಮಿಕ ವಿಷಯಗಳ ಮೇಲೆಯೇ ಆಸಕ್ತಿ.

ಮಕ್ಕಳೆಲ್ಲಾ ಬೆಳೆದು ದೊಡ್ಡವರಾದ ಮೇಲೆ ಕಾಲಕ್ರಮದಲ್ಲಿ ಧೀರಮಲ್ಲ ರಾಜನು ತೀರಿಹೋದನು. ಆ ಮೇಲೆ ಕ್ರಮದಂತೆ ಹಿರಿಯ ಕುಮಾರನಾದ ವೀರಮಲ್ಲನಿಗೆ ಪಟ್ಟಾಭಿಷೇಕದ ಏರ್ಪಾಡುಗಳು ನಡೆಯ ತೊಡಗಿದುವು. ಆ ಸಂದರ್ಭದಲ್ಲಿ ಎರಡನೆಯುವನಾದ ಶೂರಮಲ್ಲನು ತಾನು ಸಿಂಹಾಸನವನ್ನೇರಲು ಒಳತಂತ್ರ ನಡೆಸಿದನು. ಒಬ್ಬ ಚಾರನ ಮೂಲಕ ಆ ವಿಷಯ ವೀರಮಲ್ಲನಿಗೆ ಗೊತ್ತಾಯಿತು. ಅದರಿಂದ ಅವರಿಬ್ಬರೊಳಗೆ ಘರ್ಷಣೆ ತೊಡಗಿ ಒಬ್ಬರನ್ನೊಬ್ಬರು ತಿವಿದುಕೊಂಡು, ಇಬ್ಬರೂ ಸತ್ತರು.

ಇದನ್ನು ನೋಡಿ ಕಿರಿಯ ಕುಮಾರ ಗುಣಮಲ್ಲನಿಗೆ ದೊಡ್ಡ ವೈರಾಗ್ಯ ಬಂದಿತು. ಯಾರಿಗೂ ಏನೂ ಹೇಳದೆ ರಾತಾರಾತ್ರಿಯಲ್ಲಿ ನಗರವನ್ನು ಬಿಟ್ಟು ಹೊರಟು, ದೇಶಸಂಚಾರಕ್ಕೆ ತೊಡಗಿದನು. ಆಗ ಅನೇಕ ಮಂದಿ ಸಾಧು ಸನ್ಯಾಸಿಗಳ ಸ್ನೇಹ ಅವನಿಗಾಯಿತು. ಅದರಿಂದ ಅವನ ಆಧ್ಯಾತ್ಮಿಕ ಜ್ಞಾನವು ತುಂಬಿಕೊಂಡಿತು.

ಕಡೆಗೆ ಅವನು ಶಂಖವರವೆಂಬ ಗ್ರಾಮದ ಹತ್ತಿರವಿರುವ ಅರಣ್ಯವನ್ನು ಆರಿಸಿಕೊಂಡು ಒಂದು ಪ್ರಶಾಂತ ಸ್ಥಳದಲ್ಲಿ ತಪಸ್ಸಿಗೆ ಕುಳಿತನು. ಕೆಲವು ವರ್ಷಗಳು ಕಳೆಯುತ್ತಿದ್ದಂತೆ ಅವನ ಮೇಲೆ ಹುತ್ತವೆದ್ದು ಮುಚ್ಚಿಹಾಕಿತು.

ಆಗ ಏನಾಯಿತೆಂದರೆ, ಶಂಖವರ ಗ್ರಾಮದ ಜನರು, ಸಮೀಪವಿರುವ ಅರಣ್ಯದ ಸ್ವಲ್ಪಭಾಗವನ್ನು ಸಮತಟ್ಟುಗೊಳಿಸಿ ವ್ಯವಸಾಯ ಭೂಮಿಯನ್ನಾಗಿ ಮಾಡಲು ನಿರ್ಧರಿಸಿ ಕೆಲಸಕ್ಕೆ ಪ್ರಾರಂಭಿಸಿದರು. ಅವರು ಅರಣ್ಯದ ಮರಮಟ್ಟುಗಳನ್ನು ಕಡಿಯುತ್ತಾ, ಗುಣಮಲ್ಲನ ಹುತ್ತದ ಬಳಿಗೆಬಂದು, ಅದನ್ನು ಕೂಡಾ ಅಗೆದು ನೆಲ ಮಟ್ಟಮಾಡುವಾಗ, ಅದರೊಳಗಿರುವ ತಪಸ್ವಿಯನ್ನು ನೋಡಿ ಗಾಬರಿಯಾದರು. ಗುಣಮಲ್ಲನಿಗೂ ಧ್ಯಾನ ಭಂಗವಾಗಿ ಅವರನ್ನು ನೋಡಿದನು.

ಗ್ರಾಮಸ್ಥರು ಭಯದಿಂದ ನಡುಗುತ್ತ ಕೈಯೆತ್ತಿ ನಮಸ್ಕರಿಸುತ್ತ ಸಾಷ್ಟಾಂಗ ಬಿದ್ದು ತಿಳಿಯದೆ ಮಾಡಿದುದನ್ನು ಕ್ಷಮಿಸ ಬೇಕೆಂದು ಬೇಡಿದರು. ಆದರೆ ಗುಣಮಲ್ಲನು ಸ್ವಲ್ಪವೂ ಕೋಪಿಸಲಿಲ್ಲ. ಗ್ರಾಮಸ್ಥರು ಅವನ ಮುಖದಲ್ಲಿ ಕಾಣುವ ಅಪೂರ್ವ ತೇಜಸ್ಸನ್ನು ನೋಡಿ ಭಯಭಕ್ತಿ ಗೌರವಗಳಿಂದ ಕರಗಿ ಹೋದರು.

ಜನರು ಆಗಿಂದಾಗಲೇ ಆತನಿಗಾಗಿ ಅಲ್ಲೊಂದು ಪರ್ಣಕುಟೀರವನ್ನು ಕಟ್ಟಿದರು. ಅವರ ಪ್ರಾರ್ಥನೆಯಂತೆ ಗುಣಮಲ್ಲನು ಅದರೊಳಗೆ ಕುಳಿತನು. ಅದು ಹುತ್ತದಮುನಿಯಾಶ್ರಮವೆಂದು ಸುತ್ತುಮುತ್ತಲೂ ಪ್ರಸಿದ್ಧವಾಯಿತು.

ಗ್ರಾಮಸ್ಥರು ಅವನನ್ನು ನೋಡಲು ಬರತೊಡಗಿದರು. ಒಂದುಸಾರಿ ಹುತ್ತದಮುನಿಯ ದರ್ಶನ ಮಾಡಿದವರಿಗೆ ಎಷ್ಟೋವಿಧದಲ್ಲಿ ಒಳ್ಳೆಯದಾಗುವುದೆಂದು ಒಬ್ಬರಿಗೊಬ್ಬರು ಹೇಳತೊಡಗಿದರು. ದೂರದೂರದ ಗ್ರಾಮದವರು ಬಂದು, ಆತನು ತಮ್ಮೊಂದಿಗೆಬಂದು ತಮ್ಮ ಗ್ರಾಮದಲ್ಲಿದ್ದು ಜನರಿಗೆ ಜ್ಞಾನಬೋಧೆ ಮಾಡಬೇಕೆಂದು ಪ್ರಾರ್ಥಿಸಲು ತೊಡಗಿದರು. ಅದಕ್ಕೆ ಗುಣಮಲ್ಲನು ಅಂಗೀಕರಿಸಿ ಅವರೊಂದಿಗೆ ಹೋದನು.

ಶಂಖವರ ಗ್ರಾಮದಲ್ಲಿರುವ ಬಹು ದೊಡ್ಡ ರೈತನಾದ ಧನಪತಿ, ಹುತ್ತದಮುನಿ ಗುಣಮಲ್ಲನಿಗಾಗಿ ಊರನಡುವೆ ಉತ್ತಮವಾದೊಂದು ಮಂದಿರವನ್ನು ಕಟ್ಟಿಸಿದನು. ಶಂಖವರದಲ್ಲಿ ಆ ಹುತ್ತದ ಮುನಿ ಮಂದಿರವು ಪುಣ್ಯಾಶ್ರಮವೆಂದು ಬೆಳಗ ತೊಡಗಿತು. ಭಕ್ತರು ತಂಡೋಪತಂಡವಾಗಿ ಬರ ತೊಡಗಿದರು. ಆ ಪುಣ್ಯಾಶ್ರಮದ ಸೌಕರ್ಯಕ್ಕಾಗಿ ಧನಪತಿಯೊಂದಿಗೆ ಶರಭಯ್ಯನೆಂಬ ಇನ್ನೊಬ್ಬ ದೊಡ್ಡ ರೈತನೂ ಸೇರಿಕೊಂಡನು. ಆಶ್ರಮಕ್ಕೆ ಸಂಬಂಧಿಸಿದ ವ್ಯವಹಾರಗಳನ್ನು ಅವರಿಬ್ಬರೂ ನೋಡಿಕೊಳ್ಳ ತೊಡಗಿದರು.

ದಿನಗಳು ಕ್ರಮಿಸಿದಂತೆ ಅವರಿಬ್ಬರಿಗೂ ಗುಣಮಲ್ಲನ ಬೋಧನೆಗಳಿಗಿಂತಲೂ ಆಶ್ರಮ ನಿರ್ವಹಣೆಗೆ ಸಂಬಂಧಿಸಿದ ಅಧಿಕಾರದಲ್ಲಿಯೇ ಹೆಚ್ಚು ಆನಂದವು ಕಾಣ ತೊಡಗಿತು. ಕ್ರಮವಾಗಿ ಅವರಿಬ್ಬರೊಳಗೆ ಹೀಗಲ್ಲಹಾಗೆ ಎಂಬ ಚರ್ಚೆತೊಡಗಿ, ಸ್ನೇಹ ಕೆಟ್ಟು, ಪೂರ್ತಿ ಅಧಿಕಾರ ತನಗೇ ಇರಬೇಕೆಂದು ಒಳಗೊಳಗೇ ಅಂದುಕೊಳ್ಳತೊಡಗಿದರು.

ಒಂದುದಿನ "ಹುತ್ತದಮುನಿ" ಗುಣಮಲ್ಲನು ಭಕ್ತವೃಂದಕ್ಕೆ ದರ್ಶನವೀಯುವ ಸಮಯದಲ್ಲಿ ಧನಪತಿ ಗುಣಮಲ್ಲನೊಂದಿಗೆ ರಹಸ್ಯವಾಗಿ, "ಆ ಶರಭಯ್ಯ ಮಹಾಸ್ವಾರ್ಥಿ. ಕೆಟ್ಟ ಮನಸ್ಸಿನವನು.



ಆಶ್ರಮದ ನಿರ್ವಹಣೆಯಲ್ಲಿ ಅವನಿರುವುದು ಒಳ್ಳೆಯದಲ್ಲ. ನೀವು ಅವನೊಡನೆ ಮಾತಾಡದೆ ಮೌನವಾಗಿದ್ದು ಬಿಡಿ. ನೋಡಲೂ ಬೇಡಿರಿ." ಎಂದನು. ಅದನ್ನು ಕೇಳಿ ಗುಣಮಲ್ಲನು ಏನೂ ಹೇಳದೆ ಸುಮ್ಮನೆ ತಲೆಯಾಡಿಸಿದನು.

ಮಾರಣೇದಿನ ಶರಭಯ್ಯ ಗುಣಮಲ್ಲನೊಂದಿಗೆ ರಹಸ್ಯವಾಗಿ ಧನಪತಿಯು ಹಾಗೆಯೇ ಕಿವಿಮಾತು ಹೇಳಿದನು.

ಅವರಿಬ್ಬರೂ ಒಬ್ಬರನ್ನೊಬ್ಬರು ದ್ವೇಷಿಸುವ ಸಂಗತಿ ಗುಣಮಲ್ಲನಿಗೆ ಸ್ಪಷ್ಟವಾಗಿ ತಿಳಿಯಿತು. ರಾತ್ರಿ ಬಹಳ ಹೊತ್ತು ಆಲೋಚನೆ ಮಾಡಿದ ಮೇಲೆ ಗುಣಮಲ್ಲನು ಯಾರಿಗೂ ಏನೂ ಹೇಳದೆ ಎತ್ತಲೋ ಬಹುದೂರಕ್ಕೆ ಹೊರಟು ಹೋದನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ಗುಣಮಲ್ಲನ ಪ್ರವರ್ತನೆ ಅರ್ಥವಿಲ್ಲದಂತೆ

ಕಾಣುವುದಿಲ್ಲವೇ? ತನ್ನ ಮೇಲೆ ತುಂಬಾ ಭಕ್ತಿ, ಪ್ರೇಮ ವಿಶ್ವಾಸಗಳನ್ನೂ, ಆದರವನ್ನೂ ತೋರಿಸಿದ ಧನಪತಿ ಮತ್ತು ಶರಭಯ್ಯಗಳೊಳಗಿನ ಚಿಕ್ಕ ಮನಸ್ತಾಪದ ಕಾರಣವನ್ನು ತಿಳಿದು, ಉತ್ತಮ ಬೋಧನೆಗಳಿಂದ ರಾಜೀ ಮಾಡಿಸುವುದನ್ನು ಬಿಟ್ಟು, ಗ್ರಾಮಸ್ಥರಿಗೆ ತನ್ನಿಂದಾಗುವ ದಿವ್ಯೋಪದೇಶಗಳ ಉಪಕಾರವನ್ನು ಬಿಟ್ಟು ಗುಣಮಲ್ಲನು ಹೊರಟು ಹೋದುದು ನನಗೇನೂ ಸರಿತೋರುವುದಿಲ್ಲ. ಅವನ ಉದ್ದೇಶ ಏನಿರಬಹುದು? ಇಬ್ಬರೂ ತನಗೆ ಬೇಕಾದವರಾದುದರಿಂದ ಗುಣಮಲ್ಲನು ದಾಕ್ಷಿಣ್ಯಕ್ಕೆ ಬಿದ್ದು ಹಾಗೆ ತಪ್ಪಿಸಿಕೊಂಡನೆ? ಅದು ನ್ಯಾಯವೆನಿಸೀತೆ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಸಾವಿರ ಹೋಳಾದೀತು!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಗುಣಮಲ್ಲನ ಪ್ರವರ್ತನೆ ಅರ್ಥರಹಿತವಾದುದೇನೂ ಅಲ್ಲ. ತನ್ನನ್ನು ಅಭಿಮಾನಿಸುವ ಧನಪತಿ, ಶರಭಯ್ಯಗಳ ನಡುವಿನ ತಗಾದೆಯನ್ನು ತೀರಿಸಲು ಅವನು ಅವರಿಗಿಂತ ಹೆಚ್ಚಿನ ರಾಜಪದವಿಯುವನಲ್ಲ. ತನ್ನ ಬೋಧನೆಯನ್ನು ಕೇಳುತ್ತಿದ್ದೂ, ಇನ್ನೊಬ್ಬನ ಮೇಲೆ ದೂರುಹೇಳುವಂತಹವರು ತನ್ನ ಮೇಲಿನ ಆಧ್ಯಾತ್ಮಿಕ ಗೌರವವನ್ನು ಕಳೆದುಕೊಂಡಿರುವರೆಂದೇ ಆಗುತ್ತದೆ. ಅವರ ದೃಷ್ಟಿಯಲ್ಲಿ ತಾನು ಸಾಧಾರಣ ಮನುಷ್ಯನಿಗಿಂತಲೂ ಕೆಳಗಿನವನೇ. ತನ್ನಿಂದ ಅವರು ಲಾಭಗಳಿಸಲಿಕ್ಕೇ ನೋಡುತ್ತಾರೆ. ಇಂತಹ ಮನುಷ್ಯರ ಬಲಹೀನತೆಗಳಿಂದ ಹೇಸಿಕೊಂಡೇ ಆತನು ವೈರಾಗ್ಯತಾಳಿ ಅರಣ್ಯಕ್ಕೆ ಹೋಗಿದ್ದನು. ಹಾಗಿದ್ದೂ ಊರವರ ಭಕ್ತಿಯನ್ನು, ಮುಕ್ತಿಯ ಮೇಲೆ ಅವರಿಗಿರುವ ಆಸಕ್ತಿಯನ್ನು ಅರಿತು, ತನಗೆ ತಿಳಿದ ಜ್ಞಾನವನ್ನು ಅವರಿಗೂ ಹಂಚಲು ನೋಡಿದನು. ಮನುಷ್ಯರ ನಡುವೆ ಇರಲು ಒಪ್ಪಿಕೊಂಡನು. ಆದರೆ ಜನರಿಗೆ ಮುಕ್ತಿಮಾರ್ಗಕ್ಕಿಂತಲೂ ಅಧಿಕಾರದ ಮೇಲೆಯೇ ಹೆಚ್ಚಿಗೆ ಆಸಕ್ತಿಯೆಂದು ಕಡೆಗೆ ತಿಳಿಯಿತು. ಅಂತಲೇ ಜಾಡು ತಿಳಿಯದಂತೆ ಹೊರಟುಹೋದನು. ಅಷ್ಟೇ ಹೊರತು ದಾಕ್ಷಿಣ್ಯದಿಂದ ಹೊರಟುಹೋದುದಲ್ಲ. ಅಧಿಕಾರಕ್ಕಾಗಿ ಒಬ್ಬರಮೇಲೊಬ್ಬರು ಬೀಳಲಿರುವುದನ್ನು ತಿಳಿದು ಉಂಟಾದ ಅಸಹ್ಯವೇ ಅವನ ಪಲಾಯನಕ್ಕೆ ಕಾರಣ. ಅದು ಅವನಲ್ಲಿ ಸಹಜವಾಗಿಯೇ ಇರುವಂಥಾದ್ದು. ತನ್ನ ಸಹೋದರರು ಹೊಡೆದಾಡಿಕೊಂಡುದರಿಂದ ತಾನೇ ಅವನು ರಾಜ್ಯವನ್ನೇ ಬಿಟ್ಟದ್ದು?"

ಹೀಗೆರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಎಂದಿನಂತೆ ಮರದಕೊಂಬೆಗೆ ನೇತು ಹಾಕಿಕೊಂಡಿತು.





# ಮಾಯದ ಕನಸು

ಒಂದು ಊರಿನಲ್ಲಿ ಶೇಖರ ಮತ್ತು ವಿಠಲ ಎಂಬ ಒಂದೇ ಈಡಿನವರು ಒಳ್ಳೆಯ ಸ್ನೇಹದಲ್ಲೇ ಬೆಳೆದು ದೊಡ್ಡವರಾಗಿದ್ದರು. ಬಾಲ್ಯದಿಂದಲೂ ಒಟ್ಟಿಗೆ ಓಡಿಯಾಡಿ, ಓದಿಕೊಂಡು ಬಂದವರು. ಆಮೇಲೆ ಶೇಖರನಿಗೆ ಒಳ್ಳೆಯ ಉದ್ಯೋಗ ದೊರೆಯಿತು.

ವಿಠಲನಿಗೆ ಸಿಕ್ಕಿದ್ದು ಸಣ್ಣದೊಂದು ಕೆಲಸ. ಆದರೂ ಒಂದೇ ಊರಿನಲ್ಲಿ ಇಬ್ಬರೂ ಸ್ಥಿರಪಟ್ಟು ಸ್ನೇಹಿತರಾಗಿಯೇ ಇದ್ದರು.

ಇಬ್ಬರಿಗೂ ಮದುವೆಯಾದ ಮೇಲೆ ವಿಠಲನ ಹೆಂಡತಿ ಶ್ಯಾಮಲೆಗೂ, ಶೇಖರನ ಹೆಂಡತಿ ವಿಮಲೆಗೂ ಒಳ್ಳೆಯ ಸ್ನೇಹವು ಕುದುರಿಬರಲಿಲ್ಲ. ಇಬ್ಬರೊಳಗೆ ಎಷ್ಟೆಂದರಷ್ಟೇ ಇತ್ತು. ಅದಕ್ಕೆ ಕಾರಣವೇನೆಂದರೆ ವಿಮಲೆ ಧನವಂತರ ಮನೆಯಿಂದ ಬಂದವಳು ; ಶ್ಯಾಮಲೆ ಬಡವರ ಮನೆಯವಳು. ವಿಮಲೆಗೆ ಶ್ಯಾಮಲೆಯ ಮೇಲೆ ಸಣ್ಣ ದೃಷ್ಟಿಯೇ ಇತ್ತು. ಅವಳೊಂದಿಗೆ ಮಾತುಕತೆಯಾಡುವುದು ತನಗೆ ಅವಮಾನವೆಂದುಕೊಳ್ಳುತ್ತಿದ್ದಳು. ಒಂದು ಸಾರಿ ಏನೋ ಪ್ರಮಾದವಶದಿಂದ ವಿಠಲನ ಮನೆಗೆ ಬೆಂಕಿಬಿದ್ದಿತು. ಅವನು ಹೆಂಡತಿ ಮಕ್ಕಳೊಂದಿಗೆ ಜೀವಗಳನ್ನೇನೋ ಉಳಿಸಿಕೊಂಡನು. ಅವನ ಸರ್ವಸ್ವವೂ ಅಗ್ನಿಗೆ ಆಹುತಿಯಾಗಿ ಹೋಯಿತು. ಅದಕ್ಕಿಂತ ಸತ್ತಿದ್ದರೇನೇ ಒಳ್ಳೆಯದಿತ್ತು ಅನಿಸುವಂತಾಯಿತು. ಸ್ನೇಹಿತನಾದ ವಿಠಲನಿಗೆ ಬಂದ ದೀನಸ್ಥಿತಿಯನ್ನು ನೋಡಿ ಶೇಖರನು ತುಂಬಾ ಚಿಂತಿಸಿದನು. ವಿಠಲನಿಗೆ ಶೇಖರನ ಹೊರತು ಬೇರೆ ಕೆಲವರೂ ಆಪ್ತಮಿತ್ರರಿದ್ದರು. ಎಲ್ಲರೂ ಕೂಡಿ ಧನಸಹಾಯ ಮಾಡಿ, ಅವನು ಹೊಸ ಮನೆಯನ್ನು ಕಟ್ಟಿಕೊಳ್ಳಲಿಕ್ಕೆ ಸಹಾಯಮಾಡಬೇಕಾಗಿತ್ತು.

ಆದರೆ ಆ ಸಮಯಕ್ಕೆ ಶೇಖರನ ಹತ್ತಿರ ನಿಜಕ್ಕೂ ಹಣವಿರಲಿಲ್ಲ. ಹೆಂಡತಿ ಮನಸ್ಸು ಮಾಡಿದರೆ ಸಹಾಯ ಬರುತ್ತಿತ್ತು. ಹೆಂಡತಿಗೆ ಅವಳ ತೌರು ಮನೆಯವರು ಹಾಕಿದ ನಗನಟ್ಟುಗಳು ಸಾಕಷ್ಟಿದ್ದುವು. ಆದರೆ ವಿಮಲೆಗೆ ಬಂಗಾರವೆಂದರೆ ಎಲ್ಲಿಲ್ಲದಷ್ಟು ಮಮಕಾರ. ನಿದ್ರೆಯಲ್ಲಿ ಕೂಡಾ ನಗಗಳು ಶರೀರದಲ್ಲಿ ಇರಬೇಕಾದುದೇ. ಅಂಥವಳು ತನ್ನ ಮಿತ್ರ ವಿಠಲನಿಗಾಗಿ ನಗವನ್ನು ಕೊಡುವುದುಂಟೆ? ಕೇಳಲಿಕ್ಕೇ ಬಾಯಿಬರಲಿಲ್ಲ ಶೇಖರನಿಗೆ.

ಬಿ. ಎ. ರಾವು



ಶೇಖರನು ಇಕ್ಕಟ್ಟಿಗೆ ಬಿದ್ದನು. ತಾನು ಮಿತ್ರನಿಗೆ ಧನಸಹಾಯ ಮಾಡದಿದ್ದರೂ, ಕೆಲವು ನಗಗಳನ್ನಾದರೂ ಕೊಟ್ಟರೆ ಎಲ್ಲಿಯಾದರೂ ಅಡವಿಟ್ಟು ಹಣ ತಂದುಕೊಳ್ಳಲು ಸಾಧ್ಯವಿದೆ. ಪರಿಸ್ಥಿತಿ ಚೆನ್ನಾದ ಮೇಲೆ ಅವುಗಳನ್ನು ಹಿಂದಿರುಗಿಸಿ ತಂದು ಕೊಡುತ್ತಾನೆ. ಆದರೆ ವಿಮಲೆ ಇದಕ್ಕೆ ಎಂದಿಗೂ ಒಪ್ಪಿಕೊಳ್ಳಲಾರಳು.

ಅದಕ್ಕೇನು ಉಪಾಯವೆಂದು ಶೇಖರನು ಚೆನ್ನಾಗಿ ಆಲೋಚಿಸಿ, ಒಂದು ಉಪಾಯವನ್ನು ಕಂಡು ಹಿಡಿದುಬಿಟ್ಟನು. ವಿಮಲೆಗೆ ಕನಸುಗಳ ಮೇಲೆ ತುಂಬಾ ನಂಬುಗೆ ಇದೆ. ಕನಸಿನಲ್ಲಿ ಕಂಡಹಾಗೆ ಆಮೇಲಿನ ದಿನಗಳಲ್ಲಿ ನಿಜಕ್ಕೂ ಅನುಭವಕ್ಕೆ ಬರುತ್ತವೆಂದು ಅವಳು ಆಗಾಗ ಹೇಳುವಳು. ಹಿಂದೆ ಅವಳಿಗೂ ಶೇಖರನಿಗೂ ಬಂದ ಕನಸುಗಳು ಕಾಕತಾಲೀಯದ ಹಾಗೆ ನಿಜವೆನಿಸಿದ ಸಂದರ್ಭಗಳೂ ಇದ್ದುವು. ಹೆಂಡತಿಗೆ ಕನಸಿನ ಮೇಲಿರುವ ನಂಬುಗೆಯನ್ನು ವಿಠಲನ ಸಹಾಯಕ್ಕಾಗಿ ಉಪಯೋಗಿಸಿಕೊಳ್ಳಬೇಕೆಂದು ಶೇಖರನು ನಿರ್ಧರಿಸಿಕೊಂಡನು.

ಒಂದುದಿನ ಮಧ್ಯ ರಾತ್ರಿಯ ಹೊತ್ತಿಗೆ ಅವನು ಗಾಬರಿಯಿಂದ ಮೆಟ್ಟಿಬಿದ್ದವನಂತೆ ಹೆಂಡತಿಯನ್ನು ಎಬ್ಬಿಸಿದನು. ಅವಳೂ ಹೆದರಿಬಿದ್ದವಳಂತೆ ಎದ್ದು, ಮೊದಲು ಕೊರಳಲ್ಲಿರುವ ಸರಗಳನ್ನು ಮುಟ್ಟಿ ನೋಡಿ, "ಏನಾಯಿತು?" ಎಂದು ಕಣ್ಣಗಲಿಸಿ ಗಂಡನ ಮುಖ ನೋಡಿದಳು.

ಶೇಖರನು ಹೆದರಿದಂತೆ, "ಕೆಟ್ಟ ಕನಸು! ಅಬ್ಬ! ನಿಜ ಅಂತಲೇ ಮಾಡಿದೆ! ನಮ್ಮ ಮನೆಯೊಳಗೆ ಕಳ್ಳರು ಹೊಕ್ಕಹಾಗೆ!" ಎಂದನು.

ವಿಮಲೆ ನಡುಗಿ, "ಕಳ್ಳರೇ! ಈಗೇನು ಮಾಡೋದು?" ಎಂದು ಸುತ್ತಲೂ ನೋಡಿದಳು.

"ಏನು ಮಾಡಲಾದೀತು? ಅಂತೂ ಕನಸು ತಾನೇ? ಸುಮ್ಮನೆ ಗಾಬರಿಯಾಗಿ ನಿನ್ನನ್ನು ಎಬ್ಬಿಸಿಬಿಟ್ಟೆ!" ಎಂದನು ಶೇಖರ.

"ಬರೀಕನಸು ಅಂತ ಸುಮ್ಮನೆ ಹೊಡೆದು ಹಾಕಿಬಿಡಬೇಡೀಂದ್ರೆ. ಬೆಳಂಜಾವದಲ್ಲಿ ಬಂದ ಕನಸು ನಿಜವಾಗುವುದಂತೆ! ದೊಡ್ಡವರು ಕೂಡಾ ಹೇಳುತ್ತಾರೆ. ನಮಗೂ ಈ ಮೊದಲು ಒಂದೆರಡು ಮಧ್ಯರಾತ್ರಿಯ ಮೇಲೆ ಬಂದ ಕನಸು ನಿಜವಾದ್ದು ಮರೆತಿರಾ?" ಎಂದಳು ವಿಮಲ.

"ಹೌದು, ಅದು ನಿಜವೇ ಅನ್ನು. ಹಾಗಂತ ಈಗ ಏನು ಮಾಡಲು ಸಾಧ್ಯವಿದೆ, ಹೇಳು? ದೇವರೇ ಗತಿ," ಎಂದನು ಶೇಖರ.

"ಯಾವುದಕ್ಕೂ ಒಳ್ಳೇದು, ಈ ನಗಗಳನ್ನೆಲ್ಲಾ ಮನೆಯೊಳಗೆ ಒಂದು ಕಡೆ ಹೊಂಡ ತೆಗೆದು ಹುಗಿದಿಟ್ಟು ಬಿಡೋಣ. ಮತ್ತೇನೂ ಭಯವಿಲ್ಲ! ಏನಂತೀರಿ?" ಎಂದಳು ವಿಮಲ.

"ಚೆನ್ನಾಯಿತು! ಬಂದ ಕಳ್ಳ ಅಷ್ಟು ಸುಲಭವಾಗಿ ನಮ್ಮನ್ನು ಬಿಡುವನೆಂದುಕೊಂಡೆಯಾ? ಎಲ್ಲಿ

ಅಡಗಿಸಿಟ್ಟದ್ದೀರಿ ಅಂತ ನಮ್ಮನ್ನು ಹೇಗೆ ಹೇಗೋ ಹಿಂಸೆ ಪಡಿಸುತ್ತಾನೆ" ಎಂದ ಶೇಖರ.

ಅದು ನಿಜವೆಂದು ವಿಮಲೆಗೂ ತೋರಿತು. ಶೇಖರನು ಏನೋ ಆಲೋಚಿಸಿ, "ಒಂದು ಕೆಲಸ ಮಾಡಿದರೆ ಒಳ್ಳೆಯದು. ನನಗೆ ಪರಿಚಿತರಾದ ಧನಿಕರೊಬ್ಬರಿದ್ದಾರೆ. ಕೆಟ್ಟ ಕನಸಿನ ಪ್ರಭಾವ ಒಂದೆರಡು ವರ್ಷಗಳಿಗಿಂತ ಹೆಚ್ಚಿಗೆ ಇರುವುದಿಲ್ಲ ವಂತೆ. ನಮ್ಮ ನಗಗಳನ್ನೆಲ್ಲ ಅವರ ಹತ್ತಿರ ಭದ್ರವಾಗಿರಿಸೋಣ. ಇದು ಕೂಡಾ ನಿನ್ನ ತೃಪ್ತಿಗಾಗಿಯೇ! ನನಗೇನೋ ಸ್ವಪ್ನದ ಮೇಲೆ ನಂಬುಗೆ ಇಲ್ಲ" ಎಂದನು.

ವಿಮಲೆಗೆ ಗಂಡನ ಆಲೋಚನೆ ಹಿಡಿಸಿತು. ಅದರಂತೆ ಮರುದಿನವೇ ಶೇಖರನು ಹೆಂಡತಿ ಕೊಟ್ಟ ನಗಗಳನ್ನು ತೆಗೆದುಕೊಂಡು ವಿಠಲನ ಬಳಿಗೆ ಹೋದನು. ವಿಠಲನು ಅವುಗಳನ್ನು ಒತ್ತೆಯಿಟ್ಟು ಹಣ ತಂದುಕೊಳ್ಳಲು ಒಪ್ಪಲಿಲ್ಲ. ಆದುದರಿಂದ ಶೇಖರನೇ ಅವುಗಳನ್ನು ಒಯ್ದು ಒತ್ತೆಯಿಟ್ಟು ಹಣತಂದು ಒತ್ತಾಯಪೂರ್ವಕವಾಗಿ ಸ್ನೇಹಿತನಿಗೆ ಕೊಟ್ಟನು. ಸ್ನೇಹಿತನ ಔದಾರ್ಯವನ್ನು ನೋಡಿ ವಿಠಲನ ಕಣ್ಣುಗಳು ಒದ್ದೆಯಾದುವು.

ಕೆಲವು ತಿಂಗಳುಗಳು ಕಳೆದುವು. ವಿಮಲೆ ಒಂದು ದಿನ ಗಂಡನೊಂದಿಗೆ, "ಇನ್ನು ನಮ್ಮ ನಗಗಳನ್ನು ತರಬಹುದು. ಭಯವೇನಿಲ್ಲ" ಎಂದಳು. ಶೇಖರನು ಹೋಗಿಬಂದು, ಆ ಧನಿಕರು ಯಾವುದೋ ಊರಿಗೆ ಹೋಗಿದ್ದಾರೆಂದೂ, ಹದಿನೈದು ದಿನಗಳಲ್ಲಿ ಹಿಂದಿರುಗುತ್ತಾರೆಂದೂ ಹೇಳಿ ತಪ್ಪಿಸಿಕೊಂಡನು.

ಆಮೇಲೆ ಒಂದು ವಾರ ಕಳೆಯಿತು. ಒಂದುದಿನ ರಾತ್ರಿ ಥಕ್ಕನೆ ಹಳೆಯ ಕನಸು ನಿಜವಾಗಿ, ರಾತ್ರಿಯಲ್ಲಿ ಮೋರೆ ಮುಸುಕಿನ ಕಳ್ಳನೊಬ್ಬ ಶೇಖರನ ಮನೆಯೊಳಗೆ ಹೊಕ್ಕು, ಗಂಡ ಹೆಂಡಿರಿಬ್ಬರನ್ನೂ ಕತ್ತಿಯಿಂದ ತಟ್ಟಿ ಎಬ್ಬಿಸಿ, "ಮನೆಪೂರಾ ಹುಡುಕಿ ನೋಡಿದೆ. ಬೆಲೆಬಾಳುವ ಯಾವ ವಸ್ತು ಕೂಡಾ ಕಾಣುವುದಿಲ್ಲವೆಂದರೇನಿದು? ನೋಡಿದಿರಾ ಕತ್ತಿ! ಹಣವನ್ನೂ ನಗಗಳನ್ನೂ ಎಲ್ಲಿ ಅಡಗಿಸಿರುವಿರೋ



ಒಳ್ಳೇವರಲ್ಲಿ ಹೇಳಿಬಿಡಿ!" ಎಂದನು ಕಣ್ಣುಗುಡ್ಡು ತಿರುಗಿಸುತ್ತ. ಹೆದರಿ ನಡುಗುತ್ತಿರುವ ಹೆಂಡತಿಯನ್ನು ಶೇಖರನು ಗಟ್ಟಿಯಾಗಿ ಹಿಡಿದು, ಧೈರ್ಯವಾಗಿರಲು ಸೂಚಿಸಿ, ಕಳ್ಳನನ್ನು ನೋಡಿ, "ಹೊರಗಿನಿಂದ ಮನೆಯನ್ನು ನೋಡಿ, ದೊಡ್ಡ ಮನೆ, ದೊಡ್ಡದಾದ ಮೂಟೆ ಸಿಗುತ್ತದೆಂದು ನಂಬಿ ಒಳಗೆ ಬಂದಿರುವೆ ಹೌದಾ? ನಮ್ಮದು ಚಿಕ್ಕ ಸಂಸಾರವಾದರೂ ಮೇಲಿನವರೊಂದಿಗೆ ಸರಿತೂಗಬೇಕೆಂಬ ಆಶೆಯಿಂದ ದುಬಾರಿ ಖರ್ಚಿನವರಾಗಿ ಬಿಟ್ಟಿದ್ದೇವೆ. ನಿಜಕ್ಕೂ ನಾನೀಗ ತಲೆ ಮುಳುಗುವಷ್ಟು ಸಾಲದಲ್ಲಿದ್ದೇನೆ" ಎಂದನು ಧೈರ್ಯದಿಂದ.

ಕಳ್ಳ ಸ್ವಲ್ಪಹೊತ್ತು ಆಚೆ ಈಚೆ ಮೇಲೆ ಕೆಳಗೆ ನೋಡಿ, "ಛೀ ಛೀ! ಕಳ್ಳನ ಹತ್ತಿರ ಸಾಲದ ಬಾಳನ್ನು ಗೋಳಾಡುವ ನೀನೊಬ್ಬ ಮನುಷ್ಯನೋ? ಅಥವಾ ಏನೋ ನನ್ನನ್ನು ಮೋಸಪಡಿಸಲು ಹೀಗೆ ಹೇಳುವಿಯಾ? ನಿನ್ನ ಮಾತು ನಿಜವೋ ಸುಳ್ಳೋ ಪರೀಕ್ಷಿಸಿ ನೋಡಿಯೇ ಬರುತ್ತೇನೆ. ನೀನು ಈಗ ಹೇಳಿದ್ದು ಸುಳ್ಳೆಂದು ತೋರಿದರೆ...!" ಎಂದು ಕತ್ತಿಯನ್ನು ಜಳಪಿಸಿ, ಅಲ್ಲಿಂದ ಬೇಗಬೇಗನೆ ಹೊರಟುಹೋದನು.

ಕಳ್ಳ ಮನೆಯಿಂದ ಹೊರಟುಹೋದನೆಂದು ಗೊತ್ತಾದ ಮೇಲೆ, ವಿಮಲೆ ನಿಟ್ಟುಸಿರುಬಿಟ್ಟು, "ನೋಡಿದಿರಾ, ನಿಮ್ಮ ಹಳೇ ಕನಸು ನಿಜವೇ ಆಯಿತು! ನಮ್ಮ ಅದೃಷ್ಟ ಚೆನ್ನಾಗಿದ್ದುದರಿಂದ ಮೊದಲೇ ಮುಂಜಾಗ್ರತೆ ವಹಿಸಿದ್ದರಿಂದ ಪಾರಾದೆವು." ಎಂದಳು.

ಮತ್ತೆ ಕೆಲವು ದಿನಗಳು ಕಳೆದ ಮೇಲೆ ವಿಠಲನು ಮನೆಕಟ್ಟಿ ಮುಗಿಸಿ, ಸ್ವಲ್ಪ ಹಣವನ್ನೂ ಇಟ್ಟು ಕೊಳ್ಳುವವನಾದನು. ಶೇಖರನು ತಂದುಕೊಟ್ಟ ಹಣವನ್ನು ಹಿಂದಿರುಗಿಸಿ ಕೊಟ್ಟನು. ಕೂಡಲೇ ಶೇಖರನು ಒತ್ತೆಯಿಟ್ಟ ನಗಗಳನ್ನು ಬಿಡಿಸಿತಂದು ಹೆಂಡತಿಗೆ ಒಪ್ಪಿಸಿದನು.

"ಕನಸು ಕಂಡಹಾಗೆ ಕಳ್ಳನು ಬಂದು ಹೋಗಿಯೂ ಆಯಿತು. ಇನ್ನೇನೂ ಭಯವಿಲ್ಲ" ಎಂದನು ಶೇಖರ ತನೊಳಗೆ ನಗುತ್ತ.

ವಿಮಲೆ ನಗಗಳಿಗೆ ನಮಸ್ಕಾರಮಾಡಿ ತಾನು ಧರಿಸಿಕೊಂಡಳು. ಹೆಂಡತಿಯ ಮುಗ್ಧತೆಯನ್ನು ನೋಡಿ ಶೇಖರನಿಗೆ ಮುಗುಳುನಗು ಬಂದಿತು. ಅವಳ ಕನಸಿನ ನಂಬುಗೆಯೇ ಪ್ರಾಣಮಿತ್ರನ ಆಪತ್ತಿಗೆ ಸಹಾಯಕವಾಯಿತು.

ಕನಸು ನಿಜವಾಯಿತೆಂಬುದನ್ನು ಅವಳಿಗೆ ನಿರೂಪಿಸಲು, ಒಬ್ಬ ಸ್ನೇಹಿತನಿಗೆ ಕಳ್ಳನಾಗಿ ನಟಿಸಲು ಹೇಳಿದ ಸಂಗತಿಯನ್ನು ಅವನು ಎಂದೂ ಹೆಂಡತಿಗೆ ಹೇಳಲೇ ಇಲ್ಲ.






ಹಿಂದೆ ಅನುರೂಪವೆಂಬೊಂದು ದೇಶವಿತ್ತು. ಅನಂತಪಾಲನೆಂಬ ರಾಜನು ಅದನ್ನು ಒಳ್ಳೆಯ ರೀತಿಯಲ್ಲಿ ಪಾಲಿಸಿಕೊಂಡಿದ್ದನು. ಅನಂತಪಾಲ ರಾಜನು ವರ್ಷದಲ್ಲಿ ಕೆಲವು ದಿನಗಳು ವೇಷಬದಲಾವಣೆ ಮಾಡಿಕೊಂಡು ದೇಶದಲ್ಲಿ ಪರ್ಯಟನೆ ಮಾಡಿ ಪ್ರಜೆಗಳ ಸ್ಥಿತಿಗತಿಗಳನ್ನು ತಿಳಿಯುತ್ತಿದ್ದನು.

ಹಾಗೆ ಒಂದುಸಾರಿ ಅವನು ಒಂದು ಗ್ರಾಮದ ಬೀದಿಯಲ್ಲಿ ನಡೆಯುತ್ತಿದ್ದಾಗ, ಒಂದು ಮನೆಯ ಹೊರ ಜಗಲಿಯ ಮೇಲೆ ಒಬ್ಬಳು ಹೆಂಗುಸು ಚಿಂತೆಯಿಂದ ಕುಳಿತು, ಮೇಲೆ ನೋಡುತ್ತಿದ್ದಳು.

ಅವಳ ಅಷ್ಟೊಂದು ಚಿಂತೆಗೆ ಏನು ಕಾರಣವೋ ತಿಳಿಯಬೇಕೆನಿಸಿತು ರಾಜನಿಗೆ. ಅವನು ಅವಳನ್ನು ಮಾತಾಡಿಸಲು ಹೋಗಬೇಕೆಂದಿರುವಾಗ, ಪಕ್ಕದ ಮನೆಯಿಂದ ಮತ್ತೊಬ್ಬಳು ಹೆಂಗುಸು ಹೊರಗೆ ಬಂದು, ಚಿಂತಿಸುವ ನೆರೆಮನೆಯವಳನ್ನು ನೋಡಿ, "ಏನು ಕನಕಮ್ಮಾ? ತುಂಬಾ ಆಲೋಚಿಸುವ ಹಾಗಿದೆ?" ಎಂದು ಕೇಳುತ್ತಾ ಅವಳ ಹತ್ತಿರ ಬಂದಳು.

ಅವಳನ್ನು ನೋಡಿ ಕನಕಮ್ಮ ದುಃಖಭಾರದ ಸ್ವರದಲ್ಲಿ "ಏನು ಹೇಳಲಿ ಪಾರಮ್ಮಾ? ಇಷ್ಟು ಕಾಲದ ಮೇಲೆ ನಮ್ಮ ಹುಡುಗೀಗೆ ಒಳ್ಳೇ ಸಂಬಂಧ ಕೂಡಿಬಂದಿದೆ. ಅವರೇನೂ ವರದಕ್ಷಿಣೆಯ ಮಾತು ಕೂಡ ಎತ್ತಲಿಲ್ಲ. ಆದರೆ ಮದುವೆಯ ಖರ್ಚಿಗಾದರೂ ಒಂದು ಸಾವಿರದಷ್ಟು ಇಲ್ಲದೆ ಆಗುತ್ತದೆಯೆ? ನಮ್ಮವರು ಎಲ್ಲೆಲ್ಲಿ ಪ್ರಯತ್ನಿಸಿದರೂ ಸಾಲಕೂಡಾ ಹುಟ್ಟುವ ಹಾಗಿಲ್ಲ" ಎಂದಳು.

ಕನಕಮ್ಮನ ಗಂಡನು ಸಾಕೂಸಾಲದ ಸಂಪಾದನೆಯುಳ್ಳವನೆಂದು ಪಾರಮ್ಮನಿಗೆ ಗೊತ್ತು. ಆ ಗಂಡಹೆಂಡಿರು ಪ್ರಾಯಬಂದ ಮಗಳಮದುವೆಗಾಗಿ ಒಂದು ವರ್ಷದಿಂದ ಅಲೆದಾಡಿಕೊಂಡಿದ್ದಾರೆ.

"ಕನಕಮ್ಮಾ, ನಾನು ಕೂಡಾ ನಿಮ್ಮಮಗಳ ಮದುವೇ ಕುರಿತು ಆಗಾಗ ಆಲೋಚಿಸುತ್ತೇನೆ. ನಮ್ಮದೂ ನಿಮ್ಮಹಾಗಿನ ಸ್ಥಿತಿ ಅಂತ ನಿನಗೆ ಗೊತ್ತೇ ಇದೆ. ಒಂದು ವೇಳೆ ದೇವರದಯದಿಂದ ಎರಡು ಸಾವಿರರೂಪಾಯಿಯ ನಿಧಿಗಿಧಿ ನನಗೆ ಸಿಕ್ಕಿದರೆ, ಅದರಲ್ಲಿ ಒಂದು ಸಾವಿರ ನಿಮ್ಮಮಗಳ ಮದುವೇ ಖರ್ಚಿಗೆ ಕೊಟ್ಟು, ಉಳಿದ ಇನ್ನೊಂದು ಸಾವಿರದಿಂದ ಕೆಲವು ದಿನಗಳವರೆಗಾದರೂ ಹಾಯಾಗಿ ಕಾಲಕಳೆಯ ಬಹುದಿತ್ತು. ಹೇಗೆ ಬಂದೀತು

"ಸುನಂದ"

ಅಂಥ ಯೋಗ? " ಎಂದಳು ಪಾರಮ್ಮ. ರಾಜನು ಈ ಸಂಭಾಷಣೆಯನ್ನು ಕೇಳಿದನು. ಇಬ್ಬರೂ ನೆರೆಕರೆಯ ಬಡಕುಟುಂಬದವರೆಂದು ಅವನಿಗೆ ಅರ್ಥವಾಯಿತು.

ಮಾರಣೇದಿನ ಪಾರಮ್ಮ ಬೆಳಗ್ಗೆ ಎದ್ದು ಬೀದಿ ಬಾಗಿಲು ತೆರೆದು ಕಸಪೊರಕೆ ತಂದಾಗ, ಬಾಗಿಲಿನ ಬದಿಯಲ್ಲಿ ಒಂದು ಗಂಟು ಕಂಡಿತು. ಮುಟ್ಟಿ ನೋಡಲು ಅದು ನಾಣ್ಯಗಳ ಗಂಟು. ಎಣಿಸಿ ನೋಡಿದಾಗ ಎರಡು ಸಾವಿರ ರೂಪಾಯಿಗಳು ಅದರೊಳಗೆ ಇದ್ದುವು. ಬೀದಿಯಲ್ಲಿ ಎಲ್ಲಿಯೂ ಜನಸಂಚಾರವು ಕಾಣಲಿಲ್ಲ. ಅವಳು ಏನೇನೋ ಆಲೋಚಿಸಿಕೊಂಡು ಆ ಗಂಟನ್ನು ಮನೆಯೊಳಗೆ ಒಯ್ದು ಇಟ್ಟುಕೊಂಡಳು.

ಸ್ವಲ್ಪ ಹೊತ್ತು ಕಳೆಯಲು, ಆ ಬೀದಿಯಲ್ಲಿ ರಾಜಭಟನೊಬ್ಬನು ಏನೋ ಕೂಗುತ್ತಾ ಡಂಗುರ ಬಾರಿಸುವದನ್ನು ಕೇಳಿ ಪಾರಮ್ಮ ಹೊರಗೆ ಬಂದು ಗಮನಿಸಿದಳು. ಗ್ರಾಮದ ಬೀದಿಯಲ್ಲೆಲ್ಲಿಯೋ ಎರಡು ಸಾವಿರ ರೂಪಾಯಿಗಳ ಗಂಟೊಂದು ಜಾರಿ ಹೋಯಿತೆಂದೂ, ಅದನ್ನು ಎತ್ತಿಕೊಂಡವರು ಊರಹೊರಗೆ ಮಾವಿನ ತೋಪಿನಲ್ಲಿ ಬೀಡುಬಿಟ್ಟಿರುವ ಮಹಾರಾಜರ ಬಳಿಗೆ ತಂದುಕೊಟ್ಟರೆ, ಬಹುಮಾನ ಕೊಡುವರೆಂದೂ ಡಂಗುರಸಾರುತ್ತಿದ್ದನು.

ಅದನ್ನು ಕೇಳಿ ಪಾರಮ್ಮ ತನಗೆ ಸಿಕ್ಕಿದ ಗಂಟನ್ನು ತೆಗೆದುಕೊಂಡು, ಮಾವಿನತೋಪಿನಲ್ಲಿರುವ ರಾಜನ ಬಳಿಗೆ ಹೋಗಿ, ಅದು ತನಗೆ ಹೇಗೆ ದೊರಕಿತೆಂಬುದನ್ನು ಹೇಳಿ, ಗಂಟನ್ನು ರಾಜನ ಮುಂದಿಟ್ಟಳು. ರಾಜನು ಅವಳ ಪ್ರಾಮಾಣಿಕತೆಯನ್ನು ಶ್ಲಾಘಿಸಿ, "ಈ ಎರಡು ಸಾವಿರರೂಪಾಯಿಗಳನ್ನು ನಿನಗೇ ಬಹುಮಾನವಾಗಿ ಕೊಡುತ್ತೇನೆ. ತೆಗೆದುಕೋ " ಎಂದನು.

ಪಾರಮ್ಮ ಬಹಳ ಸಂತೋಷದಿಂದ ಆ ಹಣದೊಂದಿಗೆ ಮನೆಗೆ ತಿರುಗಿ ಬಂದು, ಕೂಡಲೇ ಕನಕಮ್ಮನನ್ನು ಕರೆದು ನಡೆದ ಸಂಗತಿಯನ್ನೆಲ್ಲ ಹೇಳಿ, "ಈ ಹಣ ದೇವರೂ ಮಹಾರಾಜರೂ ಕೂಡಿ ಕೊಟ್ಟದ್ದು ಅಂದು ಕೊಳ್ಳೋಣ. ಇದರಲ್ಲಿ ಸಾವಿರರೂಪಾಯಿ ನಿನಗೆ ಕೊಡುತ್ತೇನೆ, ತೆಗೆದುಕೋ, ನಿನ್ನಮಗಳ ಮದುವೆಯ ಸಮಸ್ಯೆ ತೀರಿತು!"



ಎಂದು ಹೇಳಿ ಒಂದುಸಾವಿರ ರೂಪಾಯಿಯನ್ನು ಲೆಕ್ಕಮಾಡಿ ಕನಕಮ್ಮನಿಗೆ ಕೊಟ್ಟಳು.

ಆ ಹಣವನ್ನು ನೋಡಿದ ಕ್ಷಣದಲ್ಲಿ ಕನಕಮ್ಮನಿಗೆ ಸಂತೋಷವಾದರೂ, ಅದರ ಬೆನ್ನಿಗೇ ಪಾರಮ್ಮನ ಮೇಲೆ ಅಸೂಯೆ ಎದ್ದುಕೊಂಡಿತು. ತನ್ನ ಮಗಳ ಮದುವೆಗೆ ಕೊಡುತ್ತೇನೆಂದು ಅದಳು ಹೇಳಿಕೊಂಡ ಮೇಲೆ ಪಾರಮ್ಮನಿಗೆ ಆ ಹಣದ ಗಂಟುಸಿಕ್ಕಿದೆ. ಆದರೆ ಅದು ಅವಳಿಗೆ ದೊರಕಲು ತನ್ನ ಮಗಳ ಅದೃಷ್ಟವೇ ಮುಖ್ಯಕಾರಣ. ಮದುವೆಗೆ ಒಂದು ಸಾವಿರಖರ್ಚಾದ ಮೇಲೆ ತಮ್ಮ ಹತ್ತಿರ ಮತ್ತೇನೂ ಉಳಿಯದು. ಅವಳು ಮಾತ್ರ ಮುಂದೆಯೂ ಸಂತೋಷ ಅನುಭವಿಸುತ್ತಾಳೆ. ತನ್ನ ಮಗಳ ಹೆಸರಿನಲ್ಲಿ ಬಂದ ಆ ಎಲ್ಲಹಣವೂ ತನಗೇ ಬರಬೇಕಾದ್ದು!

ಕನಕಮ್ಮನು ದುರಾಶೆಗೊಳಗಾಗಿ ಈ ಬಗೆಯ ತಲೆತಿರುಕ ಆಲೋಚನೆಯಿಂದ, ಆ ದಿನ ಸಾಯಂಕಾಲ, ಪಾರಮ್ಮ ತನ್ನ ಮನೆಯ ಹಿಂಭಾಗದಲ್ಲಿ ನೀರು ಸೇದಿಕೊಳ್ಳುವ ಸಮಯಸಾಧಿಸಿ, ಸಪ್ಪಳಿಲ್ಲದೆ ಮನೆಯೊಳಗೆ ಹೊಕ್ಕು ಮೂಲೆ ಹಲಗೆಯಲ್ಲಿದ್ದ ಹಣದ ಗಂಟನ್ನು ಎತ್ತಿಕೊಂಡು ತನ್ನ ಮನೆಗೆ ತಂದು ಬಿಟ್ಟಳು.

ಸ್ವಲ್ಪಹೊತ್ತಿನ ಮೇಲೆ ಪಾರಮ್ಮ, ಮೂಲೆ ಹಲಗೆಯಲ್ಲಿ ಹಣದ ಗಂಟು ಕಾಣದಿರಲು, ಕಳವಳಪಡುತ್ತ, ಕನಕಮ್ಮನ ಬಳಿಗೆ ಬಂದು "ನನಗೆ ಅದೃಷ್ಟವಿಲ್ಲಮ್ಮ. ಯಾವ ಕಳ್ಳನೋ ಕೈಕೊಟ್ಟ!" ಎಂದು ಆ ಸಂಗತಿಯನ್ನು ಹೇಳಿದಳು.

ಕನಕಮ್ಮ ತುಂಬಾ ಚಿಂತೆಯನ್ನೂ ಆಶ್ಚರ್ಯವನ್ನೂ ನಟಿಸುತ್ತ, "ಎಂಥಾ ಅನ್ಯಾಯ! ನೀನು ಅಡಗಿಸಿಡಬೇಕಿತ್ತು! ಹೋಗಲಿ. ನನ್ನ ಮಗಳ ಮದುವೆ ಹೇಗೋ ಆಗುತ್ತೆ. ನೀನು ಕೊಟ್ಟ ಸಾವಿರ ನಿನಗೇ ಕೊಡುತ್ತೇನೆ." ಎಂಧಳು.

"ಹಾಗೆಲ್ಲಾ ಹೇಳಬೇಡ ಕನಕಾ. ನಿನ್ನ ಮಗಳ ಮದುವೆ ಮುಖ್ಯ. ಆ ಸಾವಿರ ರೂಪಾಯಿಯಿಂದ ನನ್ನ ದರಿದ್ರ ತೀರುತ್ತೇನು? ನೀನು ಜಾಗ್ರತೆಯಾಗಿರು ಅಂತ ಹೇಳಿದೆ ಅಷ್ಟೇ!" ಎಂದಳು ಪಾರಮ್ಮ



ಕನಕಮ್ಮ ಕಳ್ಳಿಯಂತಾಗಿ ಪಾರಮ್ಮನ ಮನೆಗೆ ಹೊಕ್ಕು ಹಣದ ಗಂಟಿನೊಂದಿಗೆ ಹಿಂದಿರುಗಿ ಬರುವುದನ್ನು ರಾಜನು ಕಾವಲಿಗಿರಿಸಿದ್ದ ಇಬ್ಬರು ಭಟರು, ಬೀದಿಯಾಚೆಗಿನ ಒಂದು ಮನೆಯ ಮುಂದೆ ಕುಳಿತು ಕೊಂಡು ಗಮನಿಸಿದ್ದರು. ಅವರು ತಮ್ಮ ಮಾರುವೇಷವನ್ನು ತೆಗೆದುಹಾಕಿ, "ರಾಜಾಜ್ಞೆ" ಎಂದು ಹೇಳಿ ಕನಕಮ್ಮನ ಮನೆಯೊಳಗೆ ಹುಡುಕಿ, ಎರಡು ಸಾವಿರ ರೂಪಾಯಿಗಳನ್ನೂ ತೆಗೆದುಕೊಂಡು, ಕನಕಮ್ಮನನ್ನೂ, ಪಾರಮ್ಮನನ್ನೂ ಕೂಡಾ ರಾಜನ ಬಳಿಗೆ ಕರೆದುಕೊಂಡು ಹೋದರು.

ರಾಜನು ಪಾರಮ್ಮನನ್ನು ನೋಡಿ, "ನಾವು ನಿನಗೆಕೊಟ್ಟ ಎರಡು ಸಾವಿರ ರೂಪಾಯಿಗಳು ನನ್ನ ಭಟರಿಗೆ ಕನಕಮ್ಮನ ಮನೆಯೊಳಗೆ ಸಿಕ್ಕಿದೆ. ನಿನ್ನ ನೆರೆ ಮನೆಯವಳೇ ಆಗಿ ಸ್ನೇಹಿತಳಂತೆ ನಟಿಸಿದವಳು ನಿನ್ನ ಮನೆಹೊಕ್ಕು ಕಳ್ಳತನ ಮಾಡಿದ್ದಾಳೆ. ಆದ್ದರಿಂದ ಇವಳನ್ನು ಶಿಕ್ಷೆಗೆ ಗುರಿಪಡಿಸಬೇಕಾಗಿದೆ" ಎಂದನು ಕನಕಮ್ಮನನ್ನು ತೋರಿಸುತ್ತ.

ಕನಕಮ್ಮ ಹೆದರಿನಡುಗಿ, ತಪ್ಪನ್ನು ಒಪ್ಪಿ ಕ್ಷಮೆ ಕೇಳಲು ನೋಡುವುದರೊಳಗೆ ಪಾರಮ್ಮ ಅವಳ ಮುಂದೆ ನಿಂತು ರಾಜನನ್ನು ನೋಡಿ, "ಮಹಾಪ್ರಭೂ! ನಿಮ್ಮ ಭಟರು ತಪ್ಪು ತಿಳಿದರು. ನಾನು ಮೊದಲು ಕನಕಮ್ಮನ ಮಗಳ ಮದುವೆಗೆ ಒಂದು ಸಾವಿರಕೊಟ್ಟರೆ ಸಾಕೆಂದು ಕೊಂಡೆನು. ಆಲೋಚನೆ ಮಾಡಿದ ಮೇಲೆ ಎರಡು ಸಾವಿರವನ್ನೂ ಕೊಡುವುದೇ ಒಳ್ಳೆಯದೆಂದು ತೋರಿತು. ಒಂದು ಸಾವಿರ ನಾನಿಟ್ಟುಕೊಂಡು ಏನು ಮಾಡಲಿ ಅಂತ ಅವಳಿಗೇ ಕೊಟ್ಟಿದ್ದೆ" ಎಂದಳು.

ನೆರೆ ಮನೆಯವಳ ತಪ್ಪು ಹೊರ ಬೀಳದಂತೆ ಪಾರಮ್ಮ ಹೀಗೆ ಹೇಳುವಳೆಂದು ರಾಜನಿಗೆ ಗೊತ್ತಾಯಿತು. ಮನಸ್ಸಿನಲ್ಲಿ ಅವಳನ್ನು ಮೆಚ್ಚಿಕೊಳ್ಳುತ್ತ, "ಪಾರಮ್ಮಾ, ನಿನ್ನ ಒಳ್ಳೆಯತನವು ಪ್ರಶಂಸೆಗೆ ಪಾತ್ರವಾಗಿದೆ. ಆ ಎರಡು ಸಾವಿರ ರೂಪಾಯಿಗಳೊಂದಿಗೆ ಇನ್ನೊಂದು ಸಾವಿರ ರೂಪಾಯಿಯನ್ನು ಕೂಡಾ ನಿನಗೆ ಬಹುಮಾನ ಕೊಡುತ್ತೇನೆ. ಈ ಹಣವನ್ನೆಲ್ಲಾ ನಿನ್ನ ಹತ್ತಿರವೇ ಇಟ್ಟುಕೊಂಡು ಕನಕಮ್ಮನ ಮಗಳಮದುವೆ, ನೀನೇ ನಡೆಸಿಬಿಡು. ಅವಳ ಬುದ್ಧಿಯನ್ನು ಸರಿಮಾಡುವ ಬಾಧ್ಯತೆ ಕೂಡಾ ನಿನ್ನದೇ ಅಂತ ತಿಳಿದುಕೋ." ಎಂದನು ರಾಜ. ರಾಜನು ಕೊಟ್ಟ ಮೂರು ಸಾವಿರ ರೂಪಾಯಿಗಳೊಂದಿಗೆ ಪಾರಮ್ಮ ಕನಕಮ್ಮನನ್ನು ಕರೆದುಕೊಂಡು ಮನೆಗೆ ಹಿಂದಿರುಗಿದಳು. ಕನಕಮ್ಮ ತನ್ನ ತಪ್ಪನ್ನು ಕ್ಷಮಿಸುವಂತೆ ಪಾರಮ್ಮನ ಕಾಲಿಗೆ ಬಿದ್ದು ಅತ್ತು ಬೇಡಿಕೊಂಡಳು. "ಅದನ್ನು ಮರೆತು ಬಿಡೋಣ" ಎಂದು ಸಮಾಧಾನ ಪಡಿಸಿದಳು ಪಾರಮ್ಮ.





# ದಾಸೀಪುತ್ರ

**ರಾಜಾ** ಬ್ರಹ್ಮದತ್ತನು ಕಾಶೀರಾಜ್ಯವನ್ನು ಪರಿಪಾಲಿಸಿಕೊಂಡಿದ್ದಾಗ ಬೋಧಿಸತ್ವನು ದೊಡ್ಡ ಧನಿಕನಾಗಿ ಹುಟ್ಟಿದನು. ಅವನು ಬೆಳೆದು ದೊಡ್ಡವನಾಗಿ ಮದುವೆಮಾಡಿಕೊಂಡು, ಸ್ವಲ್ಪಕಾಲವಾದ ಮೇಲೆ ಆತನಿಗೆ ಒಬ್ಬ ಮಗನು ಹುಟ್ಟಿದನು. ಅವನ ಮಗನು ಹುಟ್ಟಿದ ಅದೇ ದಿನದಲ್ಲಿ ಅವನ ಮನೆಯ ದಾಸಿಗೆ ಕೂಡಾ ಒಂದು ಗಂಡು ಮಗು ಹುಟ್ಟಿತು. ಆ ದಾಸಿಯ ಪುತ್ರನಿಗೆ ಕಟಾಹಕನೆಂದು ಹೆಸರಿಡಲಾಯಿತು.

ಧನಿಕನಾದ ಬೋಧಿಸತ್ವನ ಕುಮಾರನೂ ದಾಸಿಯ ಪುತ್ರನಾದ ಕಟಾಹಕನೂ ಬೆಳೆಯುತ್ತಾ ಬರುತ್ತಿರಲು, ಧನಿಕನ ಕುಮಾರನ ಜತೆಯಲ್ಲಿ ಅವನ ಸೇವಕನಾಗಿ ಕಟಾಹಕನೂ ಇದ್ದನು. ಧನಿಕನ ಮಗನು ಓದಿಕೊಳ್ಳಲು ಗುರುಕುಲಕ್ಕೆ ಹೋಗುವಾಗ, ಕಟಾಹಕನು ಅವನ ಹಲಗೆ ಬಳಪ ಪುಸ್ತಕಗಳನ್ನು ಹಿಡಿದುಕೊಂಡು ಜತೆಯಲ್ಲಿ ಹೋಗುವನು. ಹೀಗಾದುದರಿಂದ ಧನಿಕನ ಮಗನು ಕಲಿತುಕೊಂಡ ವಿದ್ಯೆಗಳನ್ನೆಲ್ಲಾ ಆ ದಾಸಿಯಪುತ್ರನೂ ಕಲಿತುಕೊಂಡನು.

ಓದು ಬರೆಹಬಲ್ಲ ಗಟ್ಟಿಗನೆಂದು ಕಟಾಹಕನನ್ನು ಎಲ್ಲರೂ ಹೊಗಳ ತೊಡಗಿದರು. ಇಷ್ಟೆಲ್ಲಾ ಇದ್ದು ಕೂಡಾ ತಾನು ಸೇವಕನ ಸ್ಥಾಯಿಯಲ್ಲಿ ಇರುವುದೆಂದರೆ ಕಟಾಹಕನಿಗೆ ಸ್ವಲ್ಪವೂ ಹಿಡಿಸಲಿಲ್ಲ. ತನ್ನ ವಿದ್ಯೆಗೂ ಬುದ್ಧಿವಂತಿಕೆಗೂ ತಕ್ಕ ಸ್ಥಾನವನ್ನು ಸಂಪಾದಿಸಲೇ ಬೇಕೆಂದು ಅವನಿಗೆ ತೋರಿತು. ಕಡೆಗೆ ಅದಕ್ಕಾಗಿ ಒಂದು ಉಪಾಯವನ್ನು ಆಲೋಚಿಸಿಕೊಂಡನು.

ಕಾಶೀರಾಜ್ಯದ ನೆರೆಯಲ್ಲಿ ಪ್ರತ್ಯಂತವೆಂಬ ದೇಶವಿದ್ದಿತು. ಆ ದೇಶದಲ್ಲಿ ಬೋಧಿಸತ್ವನ ಮಿತ್ರನೊಬ್ಬನು ಲಕ್ಷಾಧಿಕಾರಿಯಾಗಿದ್ದನು. ಈ ಸಂಗತಿ ಕಟಾಹಕನಿಗೆ ಚೆನ್ನಾಗಿ ಗೊತ್ತಿತ್ತು. ಅವನಿಗೆ ತನ್ನ ಯಜಮಾನನು ಬರೆದಹಾಗೆ ಕಟಾಹಕನು ಒಂದು ಪತ್ರವನ್ನು ಈ ರೀತಿಯಾಗಿ ಬರೆದನು:

"ಈ ಪತ್ರವನ್ನು ತಮ್ಮ ಬಳಿಗೆ ತರುವವನು ನನ್ನ ಕುಮಾರನು. ನಾವು ನಮ್ಮೊಳಗೆ ರಕ್ತಸಂಬಂಧಿಗಳಾಗುವುದೇ ಉಚಿತವೆಂದು ಭಾವಿಸಿ, ನನಗೆ ಬರಲಾಗದುದರಿಂದ ನನ್ನ ಮಗನನ್ನೇ ಕಳುಹಿಸಿದ್ದೇನೆ. ನೀವು ನನ್ನ ಆಸೆಯಂತೆ ನನ್ನ ಮಗನಿಗೆ ನಿಮ್ಮ ಮಗಳನ್ನು ಕೊಟ್ಟು ಮದುವೆಯನ್ನು ಮಾಡಿ ನಿಮ್ಮ ಮನೆಯಲ್ಲಿಯೇ ಅಳಿಯನನ್ನು ಇಟ್ಟುಕೊಳ್ಳುವುದ



ರಲ್ಲಿ ಯಾವ ಅಡ್ಡಿಯೂ ನನಗಿಲ್ಲ. ನೀವು ಮನೆಯ ಳಿಯನಾಗಿರತಕ್ಕ ವರನನ್ನು ಹುಡುಕುವಿರೆಂದು ವರ್ತಮಾನ ಕೇಳಿದ್ದೇನೆ. ನಾನು ಬಿಡುವಿರುವಾಗ ಬಂದು ನಿಮ್ಮನ್ನು ನೋಡುತ್ತೇನೆ."

ಹೀಗೆ ಬರೆದ ಕಾಗದಕ್ಕೆ ತನ್ನ ಯಜಮಾನನ ಮುದ್ರಿಕೆಯನ್ನು ತಾನೇ ಒತ್ತಿ, ಯಜಮಾನನ ಖಜಾನೆಯಿಂದ ತನಗೆ ಬೇಕಾದಷ್ಟು ಹಣವನ್ನೂ ಎತ್ತಿಕೊಂಡು, ಕಟಾಹಕನು ಯಾರಿಗೂ ಹೇಳದೆ ಪ್ರತ್ಯಂತ ದೇಶಕ್ಕೆ ಹೋದನು. ಅಲ್ಲಿಯ ಲಕ್ಷಾಧಿಕಾರಿಯನ್ನು ದರ್ಶಿಸಿ ಆ ಪತ್ರವನ್ನೂ ಒಪ್ಪಿಸಿದನು. ಅದನ್ನು ಓದಿ ನೋಡಿ, ಲಕ್ಷಾಧಿಪತಿ ಸಂತೋಷದಿಂದ ಉಕ್ಕಿ, ತನ್ನ ಕುಮಾರಿಯನ್ನು ಕಟಾಹಕನಿಗೆ ಕೊಟ್ಟು ಮದುವೆ ನೆರವೇರಿಸಿ ಬಿಟ್ಟನು. ಹೀಗೆ ಕಟಾಹಕನು ದೊಡ್ಡ ಮನುಷ್ಯನಾದನು.

ಅವನಿಗೀಗ ಕೈಕಾಲುಗಳಿಗೆಲ್ಲಾ ಬೇಕಾದಷ್ಟು ನೌಕರರಿದ್ದರು. ದುಸ್ತುಗಳಲ್ಲಿ, ಊಟ ತಿಂಡಿಗಳಲ್ಲಿ, ಇತರ ವಿಲಾಸ ವಿಷಯಗಳಲ್ಲಿ ಅವನಿಗೆ ರಾಜೋಪಚಾರವೇ ನಡೆಯುತ್ತಿದ್ದಿತು. ಆದರೂ ಅವನು ದಿನಾ ಹೆಂಡತಿಯನ್ನು ತುಚ್ಛೀಕಾರವಾಗಿ ನೋಡುತ್ತ, "ಛೀಛೀ! ಈ ಪ್ರತ್ಯಂತ ದೇಶ ಶುದ್ಧ ಅನಾಗರಿಕದ್ದು! ನಾಗರಿಕತೆಯ ಗಂಧಗಾಳಿಕೂಡಾ ಇಲ್ಲದ್ದು. ಇದೆಂಥ ಊಟ! ಇದೆಂಥ ಬಟ್ಟೆ ಬರೆಗಳೋ! ಇಷ್ಟೊಂದು ಅನಾಗರಿಕತೆ ಬೇರೆಲ್ಲಿಯೂ ನಾನು ಕಂಡೇ ಇಲ್ಲ" ಎಂದು ಹೀಯಾಳಿಸಿಕೊಂಡೇ ಇರುವನು.

ಇಲ್ಲಿ ಹೀಗಿರುವಾಗ ತಮ್ಮ ಮನೆಯ ನೌಕರ ಹುಡುಗ ಏನಾದನೆಂಬ ಸಂದೇಹ ಬೋಧಿಸತ್ವನಿಗೂ ಬಂದಿತು. ಅವನ ಸಂಗತಿ ಯಾರಿಗೂ ಗೊತ್ತಿಲ್ಲವೆಂದುದನ್ನು ಕೇಳಿ ಅವನಿಗೆ ಅತ್ಯಾಶ್ಚರ್ಯವಾಯಿತು. ಆದುದರಿಂದ ಅವನು ಕಟಾಹಕನನ್ನು ಹುಡುಕಿಸಲಿಕ್ಕೆ ನಾಲ್ಕು ದಿಕ್ಕುಗಳಿಗೂ ಆಳುಗಳನ್ನು ಕಳುಹಿಸಿದನು. ಅವರಲ್ಲಿ ಒಬ್ಬನು ಪ್ರತ್ಯಂತ ದೇಶಕ್ಕೆ ಹೋಗಿ ಕಟಾಹಕನು ಒಬ್ಬ ಲಕ್ಷಾಧಿಕಾರಿಯ ಮಗಳನ್ನು ಮದುವೆಯಾಗಿ, ತನ್ನ ಹೆಸರನ್ನು ಬದಲಾಯಿಸಿಕೊಂಡು, ತಾನು ಕಾಶಿಯಲ್ಲಿದ್ದ ಒಬ್ಬ ಧನಿಕನ ಕುಮಾರ ಎಂದು ಹೇಳಿ ಬದುಕಿಕೊಂಡಿರುವನೆಂದು ಗೊತ್ತಾಯಿತು.

ಈ ವಾರ್ತೆಯನ್ನು ಕೇಳಿ ಬೋಧಿಸತ್ವನಿಗೆ ಬಹಳ ವೇದನೆಯಾಯಿತು. ತಾನೇ ಹೋಗಿ ಕಟಾಹಕನನ್ನು ಕರೆದುಕೊಂಡು ಬರಬೇಕೆಂದು ನಿಶ್ಚಯಿಸಿಕೊಂಡನು. ತನ ಯಜಮಾನನು ತನ್ನನ್ನು ಹುಡುಕಿಕೊಂಡು ಬರುವನೆಂಬ ವಾರ್ತೆ ಕಟಾಹಕನಿಗೆ ಗೊತ್ತಾಯಿತು. ಅವನು ತನ್ನ ಕಡೆಗೆ ಹೊರಟಿರುವನೆಂಬ ಸುದ್ದಿ ತಿಳಿದ ಕೊಡಲೇ ಕಟಾಹಕನು ತುಂಬಾ ಹೆದರಿದನು. ತಾನು ಪತ್ತೆಯಿಲ್ಲದೆ ಎತ್ತಾದರೂ ಓಡಿಬಿಡಲಿಕ್ಕೂ ಒಮ್ಮೆ ನಿಶ್ಚಯಿಸಿದನು. ಅದರಿಂದ ತನಗೆ ಕಷ್ಟವೇ ಹೊರತು, ಲಾಭವೇನಿಲ್ಲವೆಂದು ಮರು ನಿಮಿಷದಲ್ಲೇ ತಿಳಿದುಕೊಂಡನು. ಅದಕ್ಕಿಂತ

ಒಳ್ಳೆಯವನಾದ ತನ್ನ ಯಜಮಾನನನ್ನು ಒಲಿತು ಮಾಡಿಕೊಳ್ಳುವುದೇ ಸರಿಯಾದ ಕೆಲಸವೆಂದು ಕಡೆಗೆ ತೋರಿತು ಅವನಿಗೆ.

ತನ್ನ ಯಜಮಾನನು ಇಲ್ಲಿಯವರೆಗೆ ಬಂದು ನಿಜವನ್ನು ತಿಳಿದುಕೊಳ್ಳುವುದಕ್ಕೆ ಮೊದಲೇ, ತಾನು ಅವನನ್ನು ನೋಡಿ ಒಳ್ಳೆಯದು ಮಾಡಿಕೊಂಡು, ನಡೆದ ಸಮಾಚಾರವನ್ನೆಲ್ಲಾ ಹೇಳಿ ಕ್ಷಮೆ ಕೇಳಿಕೊಳ್ಳಬೇಕು. ಬೇರೆದಾರಿ ಇಲ್ಲ.

ಆತನು ಇಲ್ಲಿಗೆ ಬಂದುಬಿಟ್ಟರೆ ತಾನು ಆತನ ಮುಂದೆ ನೌಕರನಂತೆ ಪ್ರವರ್ತಿಸ ಬೇಕಾಗುತ್ತದೆ. ಅದನ್ನು ನೋಡಿ ಎಲ್ಲರಿಗೂ ಅನುಮಾನ ಬಂದು ಬಿಡುತ್ತದೆ. ಆದುದರಿಂದ ಕಟಾಹಕನು ತನ್ನ ಸೇವಕರೊಂದಿಗೆ, "ನಾನು ತಂದೆಯ ಮುಂದೆ ಎಲ್ಲಾ ಮಗಂದಿರ ಹಾಗೆ ನಡೆಯುವುದಿಲ್ಲ. ಅವರ ಸೇವೆಯನ್ನು ನಾನೇ ಸ್ವತಃ ಮಾಡುತ್ತೇನೆ. ನನಗೆ ತಂದೆಯ ಮೇಲೆ ತುಂಬಾ ಪೂಜ್ಯ ಭಾವವಿದೆ. ನೀವಾರೂ ಅವರ ಸೇವೆಗೆ ಬರಬೇಡಿ. ಅವರು ಊಟ ಮಾಡುವಾಗ ಪಕ್ಕದಲ್ಲಿ ನಿಂತು ಬೀಸುತ್ತಿರುತ್ತೇನೆ. ಅವರಿಗೆ ಕುಡಿಯಲು ನೀರನ್ನೂ, ಮಲಗಲು ಹಾಸಿಗೆಯನ್ನೂ ನಾನೇ ಹಾಕುತ್ತೇನೆ. ನೀವು ಯಾವುದಕ್ಕೂ ಬರಬೇಡಿ" ಎಂದು ತಾನು ತಂದೆಗೆ ಮಾಡುವ ಸೇವೆಗಳನ್ನೆಲ್ಲ ವರ್ಣಿಸಿ ಹೇಳಿದನು. ಅವನ ಪಿತೃಭಕ್ತಿಯನ್ನು ನೋಡಿ ಸೇವಕರಿಗೆ ಆಶ್ಚರ್ಯವಾಯಿತು.

ತರುವಾಯ ಕಟಾಹಕನು ತನ್ನ ಮಾವಯ್ಯನ ಬಳಿಗೆ ಹೋಗಿ, "ನನ್ನ ತಂದೆ ಬರುತ್ತಾರಂತೆ. ನಾನು ಎದುರಾಗಿ ಹೋಗಿ ಅವರನ್ನು ಕರೆದುಕೊಂಡು ಬರುತ್ತೇನೆ" ಎಂದನು. ಲಕ್ಷಾಧಿಕಾರಿ ಸರಿ ಎಂದು ಒಪ್ಪಿದನು.

ಕಟಾಹಕನು ಹೋಗಿ ತನ್ನ ಯಜಮಾನನನ್ನು ಅಷ್ಟು ದೂರದಲ್ಲೇ ಸಂಧಿಸಿ, ಅವನಕಾಲ ಮೇಲೆ ಬಿದ್ದು, ತಾನು ಮಾಡಿದುದನ್ನೆಲ್ಲಾ ಹೇಳಿ ತನಗೆ



ಅಪಾಯ ಬಾರದಂತೆ ಕಾಪಾಡ ಬೇಕೆಂದು ಅಭಯದಾನ ಕೇಳಿದನು. ಹಾಗೆಯೇ ಆಗಲೆಂದು ಬೋಧಿಸತ್ವನು ಅವನಿಗೆ ಅಭಯವನ್ನಿತ್ತನು. ಆ ಮೇಲೆ ಬೋಧಿಸತ್ವನೊಂದಿಗೆ ಕೂಡಿಕೊಂಡು ಕಟಾಹಕನು ಮಾವಯ್ಯನ ಮನೆಗೆ ಬಂದನು.

ಲಕ್ಷಾಧಿಕಾರಿ ಬೋಧಿಸತ್ವನನ್ನು ನೋಡಿ, ಸಂತೋಷಪಟ್ಟು, "ತಮ್ಮ ಕೋರಿಕೆಯ ಪ್ರಕಾರವೇ ನನ್ನ ಮಗಳನ್ನು ನಿಮ್ಮ ಮಗನೊಂದಿಗೆ ಮದುವೆ ಮಾಡಿದೆನು. ಇಬ್ಬರೂ ಸಂತೋಷವಾಗಿದ್ದಾರೆ" ಎಂದನು.

ಬೋಧಿಸತ್ವನು ತೃಪ್ತಿಯಿಂದ ತಲೆಯಾಡಿಸಿ, ಕಟಾಹಕನೊಂದಿಗೆ, ತನ್ನ ಮಗನೊಂದಿಗೆ ಮಾತಾಡುವ ಹಾಗೆಯೇ ಮಾತಾಡಿದನು.

ತರುವಾಯ ಲಕ್ಷಾಧಿಕಾರಿಯು ಮಗಳನ್ನು ಕರೆಯಿಸಿದನು. ಬೋಧಿಸತ್ವನು ಅವಳನ್ನು ಆಶೀರ್ವದಿಸಿ, "ಚೆನ್ನಾಗಿರುವಿಯಾ ಅಮ್ಮಾ? ನನ್ನ ಮಗ ನಿನ್ನನ್ನು

ಸರಿಯಾಗಿ ನೋಡಿಕೊಳ್ಳುತ್ತಿದ್ದಾನೆಯೆ?" ಎಂದು ಆಕ್ಕರೆಯಿಂದ ಕೇಳಿದನು.

"ಆ ವಿಷಯದಲ್ಲಿ ಲೋಪವೇನಿಲ್ಲವಾದರೂ, ಊಟ ತಿಂಡಿಗಳಲ್ಲಿ ಅವರಿಗೆ ಇಲ್ಲಿಯದೊಂದೂ ರುಚಿಸುವುದಿಲ್ಲವಂತೆ. ಎಷ್ಟೋ ವಿಧವಾಗಿ ಒಳ್ಳೊಳ್ಳೆಯ ಅಡಿಗೆಗಳನ್ನು ಮಾಡಿದರೂ ಅವರಿಗೆ ರುಚಿಯಾಗುವುದಿಲ್ಲ. ಅವರನ್ನು ಹೇಗೆ ತೃಪ್ತಿಪಡಿಸಬೇಕೋ ಗೊತ್ತಾವುದಿಲ್ಲ. ಅದೇ ನನಗೆ ಚಿಂತೆ" ಎಂದಳು ಕಟಾಹಕನ ಹೆಂಡತಿ.

"ಹೌದುಹೌದು. ಊಟ ತಿಂಡಿಗಳ ವಿಷಯದಲ್ಲಿ ಅವನು ನಾನಾ ಬನ್ನಬಡಿಸುವನು. ಆದುದರಿಂದ ಈಸಾರಿ ಅವನು ಊಟಕ್ಕೆಕುಳಿತು ಚೆನ್ನಾಗಿಲ್ಲವೆಂದು ಹೇಳಿದ ಕೂಡಲೇ ಒಂದು ಶ್ಲೋಕ ಹೇಳಿಬಿಡು. ನಾನು ಆ ಶ್ಲೋಕವನ್ನು ನಿನಗೆ ಬರೆದು ಕೊಡುತ್ತೇನೆ. ಅದನ್ನು ಚೆನ್ನಾಗಿ ಕಂಠಪಾಠ ಮಾಡಿಕೋ. ಅದನ್ನು ಹೇಳಿಬಿಟ್ಟರೆ ಅವನು ತಪ್ಪು ಹಿಡಿಯುವುದನ್ನು ಬಿಟ್ಟು, ಕಿಂಕಂ ಅನ್ನದೆ ಹಾಕಿದ್ದು ತಿಂದು ಏಳುತ್ತಾನೆ. ಚಿಂತೆಬಿಡು." ಎಂದು ಹೇಳಿ ಬೋಧಿಸತ್ವನು ಒಂದು ಶ್ಲೋಕವನ್ನು ಬರೆದು ಅವಳ ಕೈಗೆ ಕೊಟ್ಟನು.

ಬೋಧಿಸತ್ವನು ಕೆಲವುದಿನ ಅಲ್ಲಿದ್ದು, ಆ ಮೇಲೆ ಕಾಶೀನಗರಕ್ಕೆ ಹಿಂದಿರುಗಿ ಹೋದನು. ಅವನು ಹೋದ ಮೇಲೆ ಕಟಾಹಕನು ಹೆಂಡತಿಯ ಮೇಲೆ ಮತ್ತಿಷ್ಟು ಉರಿದು ಬೀಳತೊಡಗಿದನು. ಊಟದ ಮುಂದೆ ಕುಳಿತು ಹಾಕಿದ ಪ್ರತಿ ಪದಾರ್ಥವನ್ನೂ ನಿಂದಿಸ ತೊಡಗಿದನು.

ಒಂದುದಿನ ಕಟಾಹಕನು ಹೀಗೆ ಬಯ್ಯುತ್ತಿರುದ್ದಾಗ ಅವನ ಹೆಂಡತಿ ಈ ಶ್ಲೋಕವನ್ನು ಹೇಳಿದಳು:

"ಬಹೂಂಪಿ ಸೋವಿಕತ್ಥೇಯ್ಯ
ಅಂಞಂ ಜನಪದಂಗತೋ
ಅನ್ವಾಗಂತ್ವಾನ ದೂಸೇಯ್ಯ
ಭುಂಜ ಭೋಗೇ ಕಟಾಹಕ"

(ಕಟಾಹಕನು ಅನೇಕ ವಿಧಗಳಿಂದ ಬೈಗುಳು ತಿಂದು, ಮತ್ತೊಂದು ಕಡೆಗೆ ಹೋಗಿ ಇತರರನ್ನು ದೂಷಿಸುತ್ತ ಸಕಲ ಭೋಗಗಳನ್ನೂ ಅನುಭವಿಸುತ್ತಾನೆ.)

ಇದರ ಅರ್ಥ ಕಟಾಹಕನ ಹೆಂಡತಿಗೆ ತಿಳಿಯದು. ಆದರೆ ಕಟಾಹಕನು ಮಾತ್ರ ತನ್ನ ಯಜಮಾನನು ತನ್ನ ಹೆಸರಿನೊಂದಿಗೆ ತನ್ನ ಎಲ್ಲಾ ರಹಸ್ಯವನ್ನೂ ಹೆಂಡತಿಗೆ ಹೇಳಿಬಿಟ್ಟನೆಂದು ಅಂದುಕೊಂಡನು. ಅಂತಲೇ ಅದು ಅವನಿಗೆ ಚುರುಕ್ಕೆನಿಸಿತು. ಆದರೆ ಅವನ ಹೆಂಡತಿ ಏನೂ ವ್ಯತ್ಯಾಸವಾಗಿಲ್ಲದೆ ಎಂದಿನಂತೆಯೇ ಇದ್ದಳು. ಅವಳು ಏನು ಬಡಿಸಿದರೂ ಏನೂ ಹೇಳದೆ ಸಂತೋಷವಾಗಿರುವುದನ್ನು ನೋಡಿ ಆ ಶ್ಲೋಕದ ಮಂತ್ರಶಕ್ತಿಗೆ ಆಶ್ಚರ್ಯ ಪಟ್ಟಳು ಅವನ ಹೆಂಡತಿ!





# ಪ್ರತೀಕಾರ

ಆರನೇ ಶತಮಾನದಲ್ಲಿ ಮಹಮ್ಮದ್ ಪ್ರವಕ್ತರು ಸ್ಥಾಪಿಸಿದ ಇಸ್ಲಾಂ ಎಂಬ ನೂತನ ಮತವು ವಲಸೆ ಜಾತಿಯ ಬಡೋಯಿನ್ನರನ್ನು ಐಕ್ಯಗೊಳಿಸಿತು. ಅವರ ನಂತರ ಇಸ್ಲಾಂ ಅಧಿನೇತರಾದವರು ಖಲೀಫರೆನಿಸಿ ಅನೇಕ ದೇಶಗಳನ್ನು ಜಯಿಸಿದರು. ಭಾಗ್ಯ ತುಂಬಿದ ಹಿಂದೂಸ್ಥಾನವನ್ನು ಕೂಡಾ ಜಯಿಸುವ ಇಚ್ಛೆ ಅವರಿಗಿತ್ತು.

ಇದಕ್ಕೆ ಬೇಗದಲ್ಲೇ ಅವರಿಗೊಂದು ಅವಕಾಶ ಲಭಿಸಿತು. ಲಂಕೆಯಿಂದ ಹೊರಟು ಸಿಂಧು ಸಮುದ್ರತೀರ ಪ್ರಾಂತದಲ್ಲಿ ಪ್ರಯಾಣಿಸುವ ನೌಕೆಗಳನ್ನು ಕಳ್ಳರು ಕೊಳ್ಳೆ ಹೊಡೆದರು. ಲಂಕೆಯ ರಾಜನು ಇರಾಕಿನಲ್ಲಿರುವ ಖಲೀಫರ ಪ್ರತಿನಿಧಿಯಾದ ಅಲ್ ಹಜಾಜನಿಗಾಗಿ ಕೊಟ್ಟ ಕೆಲವು ಬೆಲೆಬಾಳುವ ಕಾಣಿಕೆಗಳು ನೌಕೆಯಲ್ಲಿದ್ದುವು.





ಆಗ ಸಿಂಧುವನ್ನು ಪಾಲಿಸುವ ರಾಜನ ಹೆಸರು ದಾಹಿರ್. ಅವನಿಂದ ಖಲೀಫರು ನಷ್ಟಪರಿಹಾರ ಕೇಳಿದರು. ದಾಹಿರ್ ಅದನ್ನು ತಿರಸ್ಕರಿಸುತ್ತ ಸಮುದ್ರ ಚೋರರ ದಾಳಿಗೆ ತಾನು ಬಾಧ್ಯನಲ್ಲವೆಂದೂ, ನೌಕೆಗಳು ತಕ್ಕ ರಕ್ಷಣೆಯಲ್ಲಿ ಪ್ರಯಾಣಿಸಬೇಕಿತ್ತೆಂದೂ ಹೇಳಿದನು.



ಈ ಉತ್ತರವನ್ನು ಕೇಳಿದ ಕೂಡಲೇ ಅಲ್ ಹಜಾಜ್ ಸಿಂಧುವನ್ನು ಜಯಿಸಲು ದೊಡ್ಡ ಸೈನ್ಯ ಕಳುಹಿಸಿದನು. ದೈಬಾಲ್ ಎಂಬಲ್ಲಿ ಭಯಂಕರ ಯುದ್ಧ ನಡೆಯಿತು. ಯುದ್ಧ ಸನ್ನದ್ಧನಾಗಿಲ್ಲದಿದ್ದರೂ ರಾಜಾ ದಾಹೀರನು ವೀರೋಚಿತವಾಗಿ ಹೋರಾಡಿ ಶತ್ರುಗಳನ್ನು ಓಡಿಸಿಬಿಟ್ಟನು. ಅನೇಕ ಸೇನಾನಿಗಳು ಸತ್ತರು.

ಸೋಲಿನ ಸಮಾಚಾರ ಕೇಳಿ ಅಲ್ ಹಜಾಜ್ ಅತ್ಯುಗ್ರನಾಗಿ, ಖಲೀಫರ ಸಹಾಯದಿಂದ ಮತ್ತಿಷ್ಟು ದೊಡ್ಡ ಸೈನ್ಯವನ್ನು ಸೇರಿಸಿ, ಸೇನಾನಾಯಕನಾಗಿ ತನ್ನ ಅಳಿಯ ಮಹಮ್ಮದ್ ಖಾಸೀಂನನ್ನು ನಿಯಮಿಸಿದನು. ಧೀರನೂ, ಯುದ್ಧ ಚತುರನೂ ಆದ ಇವನು ದೈಬಾಲಿನ ಮೇಲೆ ಮತ್ತೆ ದಾಳಿ ಇಟ್ಟನು.





ಧನಾಶೆಯುಳ್ಳವನಾದ ಕಾಕಾ ಕೋಟಾಲ್ ಎಂಬ ಸಾಮಂತನನ್ನು ಖಾಸೀಂ ತನ್ನ ಪಕ್ಷಕ್ಕೆ ಒಳಪಡಿಸಿಕೊಂಡನು. ದಾಹೀರ್ ರಾಜನಿಗೆ ಸೋಲು ಖಂಡಿತವೆಂದು ಜೋಯಿಸರು ಹೇಳಿರುವುದಾಗಿ ಕಾಕಾ ಕೋಟಾಲನು ಪ್ರಚಾರ ಪ್ರಾರಂಭಿಸಿದನು. ಆದರಿಂದ ದಾಹೀರನ ಸೈನಿಕರು ನಿರುತ್ಸಾಹಿಗಳಾದರು. ಕೆಲವು ಸೇನಾನಿಗಳು ಶತ್ರು ಪಕ್ಷಕ್ಕೆ ಸೇರಿದರು.

ರಾಜಾ ದಾಹೀರನು ಇಂತಹ ವಿಷಮ ಪರಿಸ್ಥಿತಿಗಳ ನಡುವೆ, ಶತ್ರುಗಳೊಂದಿಗೆ ವೀರೋಚಿತವಾಗಿ ಹೋರಾಡುತ್ತಾ, ಗಾಯಗೊಂಡನು. ವಿಶ್ವಾಸಿಗಳಾದ ಕೆಲವುಂದಿ ಸೈನಿಕರು ಅವನನ್ನು ಒಂದು ರಹಸ್ಯ ದ್ವಾರದ ಮೂಲಕ ಕೋಟೆಯೊಳಗೆ ಒಯ್ದರು. ಆದರೆ ಅಲ್ಲಿ ದಾಹೀರ್ ಸತ್ತನು. ಅವನ ಪತ್ನಿ ರಾಣೀಬಾಯಿ ಇದು ದುಃಖಕ್ಕೆ ಸಮಯವಲ್ಲವೆಂದುಕೊಂಡು ಕತ್ತಿಯನ್ನು ಕೈಗೆತ್ತಿಕೊಂಡಳು.





ಅವಳು ಕೋಟೆಯ ಬುರುಜಿನ ಮೇಲೆ ನಿಂತು ಸೈನಿಕರನ್ನು ಉತ್ಸಾಹಪಡಿಸಿದಳು. ಆ ವಿಧವಾಗಿ ಶತ್ರುಗಳನ್ನು ಸ್ವಲ್ಪ ಹೊತ್ತು ತಡೆಯಲು ಸಾಧ್ಯವಾದರೂ, ಅಧಿಕ ಸಂಖ್ಯೆಯಲ್ಲಿದ್ದ ಶತ್ರುಗಳು ಕೋಟೆಯೊಳಗೆ ನುಗ್ಗಿದರು. ರಾಣೀಬಾಯಿ ಸೈನಿಕರನ್ನು ಹುರಿದುಂಬಿಸುತ್ತಾ, ಕೋಟೆಯ ಗೋಡೆಯ ಮೇಲಿನಿಂದ ಶತ್ರುಗಳ ಮೇಲೆ ಎಣ್ಣೆಯಲ್ಲಿ ಅದ್ದಿಸಿದ ಬೆಂಕಿ ದೊಂದಿಗಳನ್ನೂ, ಒಂಡೆ ಕಲ್ಲುಗಳನ್ನೂ ಹಾಕಿಸಿದಳು.

ಆದರೂ ಶತ್ರುಗಳು ಕೋಟೆಯೊಳಗಿನ ಒಂದೊಂದೇ ಭವನವನ್ನು ಆಕ್ರಮಿಸಿದರು. ಸೋಲು ತಪ್ಪದೆಂದುಕೊಂಡು ರಾಣೀಬಾಯಿ, ಅಂತಃಪುರ ಸ್ತ್ರೀಯರೊಂದಿಗೆ ಒಂದು ಕೋಣೆಯೊಳಗೆ ಪ್ರವೇಶಿಸಿದಳು. ಕೋಟೆಯನ್ನು ವಶಪಡಿಸಿಕೊಂಡ ಶತ್ರುಗಳು ಆ ಕೋಣೆಯೊಳಗೆ ಸುಟ್ಟು ಹೋದ ಸ್ತ್ರೀಯರ ಶವಗಳನ್ನಷ್ಟೇ ನೋಡಿದರು.





ಜಯಶಾಲಿಯಾದ ಮಹಮ್ಮದ್ ಖಾಸೀಂ ಸತ್ತುಳಿದ ದಾಹೀರ್ ರಾಜನ ಪೌರರು ಮೂವತ್ತು ಸಾವಿರ ಮಂದಿಯನ್ನು ಓಡಿದು ಗುಲಾಮರಾಗಿ ಇರಾಕ್ ದೇಶಕ್ಕೆ ಒಯ್ದನು. ಅವರಲ್ಲಿ ಚಿಕ್ಕವರಾದ ದಾಹೀರನ ಕುಮಾರಿಯರಿಬ್ಬರಿದ್ದರು. ಖಾಸೀಂ ಅವರನ್ನು ಖಲೀಫರಿಗೆ ಕಾಣಿಕೆಯಾಗಿ ಕಳುಹಿಸಿದನು.

ಆ ಯುವರಾಣಿಯರ ಸೌಂದರ್ಯವನ್ನು ನೋಡಿ ಮುಗ್ಧರಾದ ಖಲೀಫರು ಅವರನ್ನು ವಿವಾಹವಾಗಲು ನೋಡಿದರು. ಆದರೆ ಆ ಕುಮಾರಿಯರು ಅವರೊಂದಿಗೆ ಖಾಸೀಂ ತಮ್ಮನ್ನು ಈ ಮೊದಲೇ ವಿವಾಹ ಮಾಡಿಕೊಂಡಿರುವನೆಂದು ಹೇಳಿ ಬಿಟ್ಟರು. ಇದನ್ನು ಕೇಳಿ ಖಲೀಫರು ಅತ್ಯಂತ ಕೋಪದಿಂದ ಖಾಸೀಂನನ್ನು ಚರ್ಮದ ಚೀಲದಲ್ಲಿ ಬಿಗಿಸಿ ಕಟ್ಟಿ ತನ್ನ ಬಳಿಗೆ ತರುವಂತೆ ಭಟರಿಗೆ ಆಜ್ಞಾಪಿಸಿದರು.





ಭಟರು ಖಾಸೀಂನನ್ನು ಚರ್ಮದ ಚೀಲದಲ್ಲಿ ಗಾಳಿ ನುಸುಳದಂತೆ ಅದರ ಬಾಯಿಯನ್ನು ಹೊಲಿದು ಒಯ್ಯುತ್ತಿರಲು ದಾರಿಯಲ್ಲಿಯೇ ಅವನು ಸತ್ತನು. ಇದನ್ನು ಕೇಳಿ ದಾಹೀರನ ಕುಮಾರಿಯರು ಖಲೀಫರೊಂದಿಗೆ ಅವನು ತಮ್ಮನ್ನು ವಿವಾಹ ಮಾಡಿಕೊಳ್ಳಲಿಲ್ಲವೆಂದೂ, ತಮ್ಮ ತಂದೆತಾಯಿಯರನ್ನೂ ರಾಜ್ಯವನ್ನೂ ಧ್ವಂಸ ಮಾಡಿದುದಕ್ಕೆ ಅವನ ಮೇಲೆ ಹಾಗೆ ಹೇಳಿ ಹಗೆ ತೀರಿಸಿಕೊಂಡೆವೆಂದೂ ಹೇಳಿದರು. ಖಲೀಫರು ಇನ್ನಷ್ಟು ಕೋಪದಿಂದ ಅವರಿಬ್ಬರನ್ನೂ ಸಜೀವವಾಗಿ ಭೂಮಿಯಲ್ಲಿ ಹುಗಿಸಿಬಿಟ್ಟರು.

# ದಿನನಿತ್ಯ ದಿಗಿಲೇ!

ದಿನಭತ್ಯಕ್ಕೆ ಕೂಲಿ ಕೆಲಸ ಮಾಡುವ ರಂಗಪ್ಪನು ಯಾವಾಗಲೂ ಏನೋ ದಿಗಿಲಿನಿಂದಿರುವುದನ್ನು ನೋಡುತ್ತಿದ್ದ ಅವನ ಮಿತ್ರ ಗೋವಿಂದನು, ಒಂದು ದಿನ ಕುತೂಹಲವನ್ನು ತಾಳಲಾಗದೆ ಚಿಂತೆಗೆ ಏನು ಕಾರಣವೆಂದು ರಂಗಪ್ಪನನ್ನು ಕೇಳಿದನು.

"ಏನು ಹೇಳಲಿ ಗೋವಿಂದಾ? ನಮ್ಮ ಯಜಮಾನ ಕೊಡುವ ದಿನಗೂಲಿ ಎಷ್ಟು ಕಡಿಮೆಯೆಂದರೆ, ಅದು ನನಗೆ ಉಪ್ಪು ಮೆಣಸಿಗೆ ಕೂಡಾ ಸಾಲದು. ಯಾರಾದರೂ ನಿನ್ನಂಥವರು ಸ್ವಲ್ಪ ಹೇಳಿದರೆ ನನ್ನ ದಿನಗೂಲಿಯನ್ನು ಹೆಚ್ಚಿಸುವರೋ ಏನೋ? ನಿನ್ನ ಮಾತಿಗೆ ಸ್ವಲ್ಪ ಬೆಲೆ ಬಂದೀತು. ಆದ್ದರಿಂದ ನೀನಾದರೂ ಸ್ವಲ್ಪ ಅವರಿಗೆ ಹೇಳಿ ಪುಣ್ಯಕಟ್ಟಿಕೊಳ್ಳುವೆಯಾ ? ಹೊಟ್ಟೆಗೆ ಸಾಲದ್ದರಿಂದ ಸಹನೆ ತಪ್ಪಿ ತಿಂಗಳಿನಲ್ಲಿ ಅನೇಕ ದಿನಗಳು ಕೆಲಸಕ್ಕೆ ಹೋಗದೆ ಸುಮ್ಮನಿರುತ್ತೇನೆ" ಎಂದನು.

ಗೋವಿಂದನು ರಂಗಪ್ಪನ ಯಜಮಾನನೊಂದಿಗೆ ಮಾತಾಡಿ, ಒಪ್ಪಿಸಿ ರಂಗಪ್ಪನ ದಿನಕೂಲಿ ಎರಡು ಪಾಲು ಹೆಚ್ಚುವಂತೆ ಮಾಡಿದನು.

ಕೆಲವು ದಿನಗಳು ಕಳೆದ ಮೇಲೆ ರಂಗಪ್ಪ ಮತ್ತೆ ದಿಗಿಲು ಮೋರೆಯಲ್ಲಿರುವುದನ್ನು ನೋಡಿ ಗೋವಿಂದನು ಕಾರಣ ಕೇಳಿದನು.

"ಏನು ಹೇಳಲಿ ಗೋವಿಂದಾ ? ಒಂದು ದಿನ ಕೂಡಾ ಕೆಲಸ ತಪ್ಪಿಸಲು ಮನಸ್ಸು ಒಪ್ಪುವುದಿಲ್ಲ. ಹಾಗೆ ತಪ್ಪಿಸಿಕೊಂಡು ಬಿಟ್ಟರೆ ತುಂಬಾ ಕೂಲೀ ಹಣ ನಷ್ಟವಾಗುತ್ತದಷ್ಟೆ ? ಅದೇ ನನ್ನ ದಿಗಿಲು, ಏನು ಮಾಡಲಿ ಅಂತ !" ಎಂದನು ರಂಗಪ್ಪ.

"ಹಾಗಾದರೆ ಚಿಂತೆ ಅವನ ಹಣೆಬರಹವೇ ಸರಿ" ಎಂದುಕೊಂಡ ಗೋವಿಂದ.





# ತಪ್ಪಿಹೋದಸಿರಿ

ಒಂದಾನೊಂದು ಚಿಕ್ಕಹಳ್ಳಿಯಲ್ಲಿ ಮಂದರ ನೆಂಬ ಬಡಯುವಕನಿದ್ದನು. ಅವನಿಗೆ ತನ್ನ ತಂದೆತಾಯಿಗಳಾರೆಂದು ಗೊತ್ತಿರಲಿಲ್ಲ. ಇನ್ನು ಬಂಧುಬಳಗದವರು ಎಲ್ಲಿಂದ ಬಂದಾರು ಪಾಪ? ಬದುಕುವ ದಾರಿಗೆ ಅಗತ್ಯವಾದ ಯಾವುದೊಂದು ವೃತ್ತಿಕೂಡಾ ಅವನಿಗೆ ಹತ್ತಿಕೊಳ್ಳಲಿಲ್ಲ. ಊರಿವರಿಗೆಲ್ಲಾ ಬಿಟ್ಟೀ ಚಾಕರಿ ಮಾಡುವವನಾಗಿದ್ದನು.

ದಿನಾರಾತ್ರಿ ಊರಿನ ಕೆಲಮಂದಿ ಹಿರಿಯರು ತಮ್ಮ ಊಟಗೀಟವೆಲ್ಲ ಮುಗಿದ ಮೇಲೆ ಮಲಗುವ ಮೊದಲು ಕಾಲಾಡಿಸುತ್ತ ಅರಳೀ ಮರದ ಬುಡದಲ್ಲಿ ಸೇರಿ ಲೋಕಾಭಿರಾಮವಾಗಿ ಮಾತಾಡಿಕೊಳ್ಳುವರು. ಹಾಗೆ ಮಾತಾಡುತ್ತ, ಒಂದುದಿನ ಮಾತಿನ ಸಂದರ್ಭದಲ್ಲಿ ಬಡವನಾದ ಮಂದರನ ಪ್ರಸ್ತಾಪ ಬಂತು. ಅವನಿಗೆ ಏನಾದರೊಂದು ವೃತ್ತಿಯನ್ನು ಕಲ್ಪಿಸಿ, ಒಂದು ಮನೆಯವನನ್ನಾಗಿ, ಮಾಡಬೇಕೆಂದು ಅವರೊಳಗೆ ನಿರ್ಣಯಿಸಿಕೊಂಡರು,

ಮರುದಿನ ಹಳ್ಳಿಯೊಳಗಿನ ನೂರು ಕುಟುಂಬಗಳವರಿಗೆ ಕುಟುಂಬಕ್ಕೆ ಒಂದು ಕಾವಡಿ ನೀರನ್ನು ಕೆರೆಯಿಂದ ತಂದು ಹಾಕಬೇಕೆಂದು ಮಂದರನಿಗೆ ಹೇಳಿದರು. ಆದಕ್ಕೆ ಪ್ರತಿಫಲವಾಗಿ ದಿನಾ ಒಂದೊಂದು ಮನೆಯವರು ಅವನಿಗೆ ಭೋಜನ ಹಾಕುವುದೆಂದೂ ಎಲ್ಲರೂ ಸೇರಿ ಅವನಿಗೊಂದು ಸಣ್ಣ ಮನೆಯನ್ನು ಕಟ್ಟಿಕೊಡುವುದೆಂದೂ ಏರ್ಪಾಡು ನಡೆಯಿತು. ಇದನ್ನು ಕೇಳಿ ಮಂದರನಿಗೂ ಸಂತೋಷವಾಯಿತು.

ಅಂದಿನಿಂದ ಮಂದರನು ಬೆಳಗ್ಗಿನಿಂದ ಸಾಯಂಕಾಲದ ವರೆಗೆ ಕೆರೆಯಿಂದ ಕಾವಡಿನೀರು ತಂದು ಮನೆಯವರಿಗೆ ಸುರಿಯುತ್ತಿದ್ದನು. ಮೊದಮೊದಲು ಅಭ್ಯಾಸವಿಲ್ಲದೆ ಕಷ್ಟವಾದರೂ ಮೂರು ನಾಲ್ಕು ದಿನಗಳಲ್ಲಿ ಅದು ಅವನಿಗೆ ಸುಲಭವೂ ಆಯಿತು,

ಕೆಲವು ದಿನಗಳ ಮೇಲೆ ಊರಹಿರಿಯರು ಅರಳೀ ಮರದಕೆಳಗೆ ಮಾತಾಡುತ್ತಿರುವಾಗ ಮಂದರನು ಕೂಡಾ ಸ್ವಲ್ಪ ದೂರದಲ್ಲಿ ಕುಳಿತು ಅವರ ಮಾತುಗಳನ್ನು ಕಿವಿಗೊಟ್ಟು ಕೇಳುತ್ತಿದ್ದನು. ಆ ದಿನ ಸ್ವಾರಸ್ಯವಾದ ಸುದ್ದಿಯೊಂದು ಅವರ ನಡುವೆ ತಾಕಲಾಡುತ್ತಿತ್ತು.

ಆ ಹಳ್ಳಿಯಲ್ಲಿ ಕೆರೆಯ ಹತ್ತಿರವಿರುವ ಅತಿ ಪುರಾತನವಾದ ಶಿವಾಲಯವನ್ನು ಕುರಿತು ಅವರ ಮಾತು ತೊಡಗಿತು. ಆ ಶಿವಾಲಯದಲ್ಲಿರುವ

ಒಂದು ಶಾಸನದಲ್ಲಿ ವಿಚಿತ್ರ ವಿಷಯವನ್ನು ಕೆತ್ತಲ್ಪಟ್ಟಿರುವುದೆಂದು ಒಬ್ಬ ವೃದ್ಧನು ಹೇಳಿದನು.

ಅದರಲ್ಲಿರುವ ಸಮಾಚಾರವೇನಂದರೆ, "ಯಾವನೇ ಆಗಲಿ, ಶಿವಲಿಂಗಕ್ಕೆ ನಡುವೆ ನಿಲ್ಲಿಸದೆ ನೂರಾ ಐವತ್ತು ಬಿಂದಿಗೆ ನೀರು ಅಭಿಷೇಕಮಾಡಿದಲ್ಲಿ ಅವನು ಚಕ್ರವರ್ತಿಯಾಗುತ್ತಾನೆ."

ಇದನ್ನು ಕೇಳಿ ಒಬ್ಬ ಹಿರಿಯನು "ಅದು ಬರೀ ಸುಳ್ಳು" ಎಂದು ವಾದಿಸಿದನು. ನೂರೈವತ್ತು ಬಿಂದಿಗೆ ನೀರು ಅಭಿಷೇಕ ಮಾಡಿದರೆ ಚಕ್ರವರ್ತಿ ಪದವಿ ಲಭ್ಯವಾಗುವಹಾಗಿದ್ದರೆ, ಆ ಕೆಲಸವನ್ನು ಪ್ರತಿಯೊಬ್ಬನೂ ಮಾಡಬಲ್ಲನೆಂದೂ, ಎಲ್ಲರೂ ಚಕ್ರವರ್ತಿಗಳಾಗುವರೆಂದೂ ಗೇಲಿಯಾಗಿ ಹೇಳಿದನು. ಇಷ್ಟುಕಾಲದವರೆಗೆ ಯಾರೂ ಆ ಕೆಲಸ ಯಾಕೆ ಮಾಡಲಿಲ್ಲವೆಂದು ಕೆಲವರು ಕೇಳಿದರು. ಸ್ವಲ್ಪ ಹೊತ್ತು ವಾದನಡೆದ ಮೇಲೆ ಅದು ಸುಳ್ಳು ಶಾಸನವೇ ಎಂದು ಅವರೆಲ್ಲಾ ಒಪ್ಪಿಕೊಂಡು ಆ ಸಂಗತಿಯನ್ನು ಬಿಟ್ಟು ಬೇರೆ ವಿಷಯವನ್ನು ಹಿಡಿದುಕೊಂಡರು.

ಈ ವಾದೋಪವಾದಗಳನ್ನು ಕೇಳಿದ ಮಂದರನಿಗೆ ಆ ದಿನರಾತ್ರಿ ನಿದ್ದೆಯೇ ಬರಲಿಲ್ಲ. ಅತಿ, ಪುರಾತನವಾದ ಆ ಶಾಸನವು ಸುಳ್ಳಾಗುವುದೆಂದರೇನು? ನೂರೈವತ್ತು ಬಿಂದಿಗೆ ನೀರನ್ನು ಹೊರುವಷ್ಟು ಸಹನೆಯೂ ಹಟವೂ ಇಲ್ಲದುದರಿಂದಲೇ ಅವರೆಲ್ಲಾ ಅದನ್ನು ಕುರಿತು ಗೇಲಿಯಾಗಿ ಮಾತಾಡಿದರು, ಅಷ್ಟೇ ಎಂದು ಅವನಿಗೆ ತೋರಿತು. ನಂಬುಗೆ ಬಲವಾಯಿತು.

"ನನ್ನ ಕೆಲಸವೇ ನೀರು ಹೊರುವುದು. ನೂರೈವತ್ತು ಬಿಂದಿಗೆ ನೀರನ್ನೂ ಹೊತ್ತುತಂದು ಆ ಶಿವಲಿಂಗಕ್ಕೆ ಎರೆದು ಬಿಡುತ್ತೇನೆ. ಶಾಸನದ ಪ್ರಕಾರವಾದರೆ ನಾನು ಚಕ್ರವರ್ತಿಯಾಗುತ್ತೇನೆ. ಇಲ್ಲಾ, ಅಷ್ಟು ಪುಣ್ಯವಾದರೂ ಬಾರದೆ ಹೋಗುತ್ತದೆಯೆ? ಶಿವನಿಗೆ ಮಾಡಿದ ಅಭಿಷೇಕವು ಎಂದಿಗೂ ಸುಮ್ಮನೆ ಹೋಗದು. ಎಂದು ಕೊಂಡನು ಮಂದರ.



ಮರುದಿನ ಹಳ್ಳಿಯು ಮನೆಯವರಿಗೆ ನೀರು ಹೊತ್ತು ಹಾಕಿ ಮುಗಿದ ಮೇಲೆ, ಶಿವಲಿಂಗಕ್ಕೆ ನೀರಿನ ಅಭಿಷೇಕ ಮಾಡಲು ಪ್ರಾರಂಭಿಸಿದನು. ಒಂದು...ಎರಡು...ಮೂರು ಎಂದು ಲೆಕ್ಕವಿಟ್ಟು ಕೊಳ್ಳುತ್ತಾ ನೀರಿನ ಬಿಂದಿಗೆಯನ್ನು ತಲೆಯಲ್ಲಿ ಹೊತ್ತು ತಂದು ಹೊಯ್ಯಲು ತೊಡಗಿದನು.

ಸರಿಯಾಗಿ ನೂರಾ ನಲುವತ್ತು ಬಿಂದಿಗೆ ನೀರು ಅಭಿಷೇಕವಾದಾಗ ಮಂದರನಿಗೆ ನಿತ್ರಾಣವಾಗ ತೊಡಗಿತು. ಆಯಾಸದಿಂದ ಕಾಲು ನಡುಗಲು ಪ್ರಾರಂಭಿಸಿತು. ಇನ್ನು ಕೇವಲ ಹತ್ತು ಬಿಂದಿಗೆ ತಾನೇ ಹೇಗಾದರೂ ಸಹನೆಯಿಂದ ತಂದುಬಿಡುತ್ತೇನೆಂದು ದೃಢನಿಶ್ಚಯ ಮಾಡಿಕೊಂಡನು.

ಹಾಗೂಹೀಗೂ ಮತ್ತೆ ಎಂಟು ಬಿಂದಿಗೆ ನೀರು ತಂದು ಲಿಂಗದ ಮೇಲೆ ಸುರಿದನು. ಆಯಾಸವು

ವಿಪರೀತವಾಯಿತು. ಉಬ್ಬಸ ಬಿಡುತ್ತಾ, ಶಿವಲಿಂಗವನ್ನು ನೋಡಿ, ತನ್ನ ಶರೀರವನ್ನೂ ಪರೀಕ್ಷಿಸುವಂತೆ ನೋಡಿದನು.

"ನೂರಾನಲುವತ್ತೆಂಟು ಬಿಂದಿಗೆ ನೀರನ್ನು ಅಭಿಷೇಕ ಮಾಡಿದರೂ ನನ್ನಲ್ಲಿ ಚಕ್ರವರ್ತಿಯ ಯಾವಲಕ್ಷಣವೂ ಕಾಣಿಸುವದಿಲ್ಲ. ಅಷ್ಟೊಂದು ತಿಳಿದ ಊರಿನ ಹಿರಿಯರು ಈ ಶಾಸನವು ಸುಳ್ಳೆಂದು ಹೇಳಿದ್ದು ನಿಜವೇ ಆಗಿರಬೇಕು. ನಾನೊಬ್ಬ ಮುಟ್ಠಾಳನಾದುರಿಂದಲೇ ಸುಮ್ಮಸುಮ್ಮನೆ ಇಷ್ಟು ಕಷ್ಟಪಟ್ಟೆ. ಸರಿ, ಆದುದೇನೋ ಆಗಿಹೋಯಿತು. ಈಸಾರಿ ಕಡೇಬಾರಿ ಒಂದು ಕಾವಡಿ ಹೊತ್ತುತಂದು ಆ ಎರಡು ಬಿಂದಿಗೆಗಳನ್ನೂ ಈ ಲಿಂಗದ ತಲೇ ಮೇಲೆ ಬಿಡಿದುಬಿಡುತ್ತೇನೆ. ನನಗೆ ಇಷ್ಟೊಂದು ಕಷ್ಟವನ್ನು ಕೊಟ್ಟ ಈ ಶಿವಲಿಂಗವು ಒಡೆದುಪುಡಿಯಾಗಬೇಕಾದ್ದೇ. ಆ ಮೇಲೆ ಊರವರು ನನ್ನನ್ನು ಬೈಯಲಿ, ಹೊಯ್ಯಲಿ, ಹುಚ್ಚಾ ಅನ್ನಲಿ. ಏನು ಬೇಕಾದರೂ ಮಾಡಲಿ!" ಎಂದುಕೊಳ್ಳುತ್ತಾ ಮಂದರನು ಕೋಪದಿಂದ ಕೆರೆಗೆ ಹೋಗಿ ಬೇಗಬೇಗನೇ ಕಾವಡಿ ಬಿಂದಿಗೆಗಳೊಂದಿಗೆ ತಿರುಗಿಬಂದನು.

ಈಗ ಅವನ ಕೋಪವು ಇನ್ನೂ ಹೆಚ್ಚಾಯಿತು. ನೀರು ತುಂಬಿದ ಎರಡು ಕೊಡಗಳನ್ನೂ ಎತ್ತಿ ಶಿವಲಿಂಗದ ಮೇಲೆ ಧಡಾಲ್ಲನೆ ಒಗೆದನು.

ಮರುಕ್ಷಣದಲ್ಲೇ ಆ ಶಿವಲಿಂಗವು ಎರಡಾಗಿ ಸೀಳಿ ಅದರ ಮಧ್ಯದಿಂದ ತ್ರಿಶೂಲಧಾರೀ ಶಿವನು ಪ್ರತ್ಯಕ್ಷನಾದನು. ಮಂದರನು ಭಯದಿಂದ ನಡುಗುತ್ತಿರಲು ಶಿವನು:

"ಎಲೋ ಮೂರ್ಖ ಮಂದರಾ! ಮಂದಬುದ್ಧಿಯುವನೇ! ಮಾಡುವ ಕೆಲಸವನ್ನು ಭಕ್ತಿಶ್ರದ್ಧೆಗಳಿಂದ ಮಾಡಿ ಫಲವನ್ನು ಕೋರುವುದು ಬುದ್ಧಿವಂತರ ಲಕ್ಷಣ. ನಿನ್ನ ಮೂರ್ಖ ಚೇಷ್ಟೆಯಿಂದ ಫಲವನ್ನೇ ಕಳೆದುಕೊಂಡೆ! ಆ ಎರಡು ಬಿಂದಿಗೆ ನೀರನ್ನು ಭಕ್ತಿಯಿಂದಲೇ ಅಭಿಷೇಕ ಮಾಡುತ್ತಿದ್ದರೆ ನೀನು ನಿಜಕ್ಕೂ ಚಕ್ರವರ್ತಿತ್ವಕ್ಕೆ ಅರ್ಹನಾಗುತ್ತಿದ್ದೆ. ನಡೆ, ಈ ಪ್ರದೇಶದಿಂದ! ಇಷ್ಟೇ ನಿನ್ನ ಅದೃಷ್ಟ!" ಎಂದು ಜರೆದನು.

ಮಂದರನು ತಲೆತಗ್ಗಿಸಿಕೊಂಡು ಆಲಯದಿಂದ ಹಿಂದಿರುಗಿದ ಕೂಡಲೇ ಒಡೆದ ಶಿವಲಿಂಗವೂ, ಶಿವನೂ ಅಲ್ಲಿಕಾಣಿಸಲಿಲ್ಲ.

ಮಂದರನು ನಡೆದ ಸಂಗತಿಯನ್ನು ಹಳ್ಳಿಯ ಹಿರಿಯರೊಂದಿಗೆ ಹೇಳಿದನು. ಅವರು ಆಶ್ಚರ್ಯದಿಂದ ಶಿವಾಲಯಕ್ಕೆ ಬಂದು ನೋಡಿದರು. ಅಲ್ಲಿ ಶಿವಲಿಂಗವೂ ಇಲ್ಲ, ಶಾಸನದಕಲ್ಲೂ ಇಲ್ಲ. ಅಭಿಷೇಕದ ನೀರು ಮಾತ್ರ ಬೇಕಾದಷ್ಟಿತ್ತು. ಆದುದರಿಂದ ಮಂದರನು ಹೇಳಿದುದನ್ನು ನಂಬಿ ದಂಗಾದರು.



# ದೊಡ್ಡಗೆರೆ, ಸಣ್ಣಗೆರೆ

**ವೀ**ರಣ್ಣನೊಬ್ಬ ಸಾಮಾನ್ಯ ಕುಟುಂಬಸ್ಥ. ಅವನಿಗೆ ಇಬ್ಬರು ಗಂಡು ಮಕ್ಕಳಿದ್ದರು.

ಅವರು ಚಿಕ್ಕವರಾಗಿದ್ದಾಗ ವೀರಣ್ಣ ಕರಿಹಲಗೆಯ ಮೇಲೆ ಒಂದು ಗೆರೆ ಎಳೆದು, ಅದನ್ನು ಅಳಿಸದೆ ಚಿಕ್ಕದು ಮಾಡಲು ಹೇಳಿದನು.

ದೊಡ್ಡವನು ಎಷ್ಟು ಆಲೋಚಿಸಿದರೂ ಸಾಧ್ಯವಾಗದೆ ತಲೆ ತುರಿಸಿಕೊಂಡನು.

ಚಿಕ್ಕವನು ಮಾತ್ರ ಆ ಗೆರೆಯ ಪಕ್ಕದಲ್ಲಿ ದೊಡ್ಡ ಗೆರೆಯನ್ನು ಎಳೆದು ಅದನ್ನು ಚಿಕ್ಕದು ಮಾಡಿ ತೋರಿಸಿದನು. ಆಗ ವೀರಣ್ಣ ಅವನ ಬೆನ್ನು ತಟ್ಟಿದನು.

ಕಾಲಕ್ರಮದಲ್ಲಿ ಮಕ್ಕಳು ದೊಡ್ಡವರಾಗಿ ಮದುವೆ ಮಾಡಿಕೊಂಡು ಬೇರೆಬೇರೆ ಮನೆಗಳಲ್ಲಿ ಸಂಸಾರ ನಡೆಸ ತೊಡಗಿದರು. ವೀರಣ್ಣ ಹೆಂಡತಿಯೊಂದಿಗೆ ದೊಡ್ಡ ಮಗನ ಬಳಿಯಲ್ಲಿ ಇರತೊಡಗಿದನು.

ಆದರೆ ಅತ್ತೆ ಸೊಸೆಯರೊಳಗಿನ ಚಿರಿಪಿರಿ ತಾಳಲಾಗದೆ, ಸ್ವಲ್ಪ ದಿನಗಳ ಮೇಲೆ ಅಲ್ಲಿಂದ ಹೊರಟು ಚಿಕ್ಕ ಮಗನ ಮನೆಯನ್ನು ಸೇರಿದನು ವೀರಣ್ಣ.

ಆದರೆ ಅಲ್ಲಿಯೂ ವೀರಣ್ಣನಿಗೆ ಕಷ್ಟವೇ ಇದಿರಾಯಿತು. ಚಿಕ್ಕ ಸೊಸೆ ಅತ್ತೆಮಾವಂದಿರನ್ನು ಲಕ್ಷ್ಯ ಮಾಡದೆ ಬಹಳ ಹೀನತೆಯಿಂದ ನೋಡುತ್ತಿದ್ದಳು. ಕಡೆಗೆ ಮಗನೂ ಸೊಸೆಯೂ ಒಂದಾಗಿ ಅವನನ್ನು ಮನೆಯಿಂದ ಹೊರಗೆ ಹಾಕಿ ಬಿಟ್ಟರು.

ವೀರಣ್ಣ ಮತ್ತೆ ದೊಡ್ಡವನ ಮನೆಗೇ ಬಂದು ಇರತೊಡಗಿದನು. ಈಗ ದೊಡ್ಡ ಮಗನ ಮನೆಯೇ ಬಹಳ ಸುಖವಾಗಿರುವಂತೆ ಕಂಡಿತು.

"ನನ್ನ ದೊಡ್ಡ ಮಗನೂ ದೊಡ್ಡ ಸೊಸೆಯೂ ಚಿನ್ನದಂಥವರು. ಅವರ ಹತ್ತಿರ ತುಂಬಾ ಸುಖವಾಗಿದೆ" ಎಂದು ವೀರಣ್ಣನು ತಿಳಿದವರೊಂದಿಗೆ ಹೇಳಿಕೊಳ್ಳ ತೊಡಗಿದನು.

ಇದನ್ನು ಕೇಳಿ ದೊಡ್ಡವನು ಮನಸ್ಸಿನಲ್ಲಿ ಸಂಕಟಪಡುತ್ತ, "ಅದೇನೂ ಅಲ್ಲ ಅಪ್ಪಾ. ಇಬ್ಬರೂ ಒಂದೇ ವಿಧ ಅಲ್ಲೀ. ಚಿಕ್ಕಂದಿನಲ್ಲಿ ನೀವೇ ಕಲಿಸಿದ ಪಾಠ ಮರೆತಿರಾ ? ಒಂದು ಗೆರೆಯ ಮುಂದೆ ಇನ್ನೊಂದು ಗೆರೆ ಸಣ್ಣ ದಾಯಿತು. ಅಷ್ಟೆ !" ಎಂದು ಹೇಳಿಕೊಂಡನು.





# ಪಿಶಾಚಿಗಳ ಕುಯುಕ್ತಿ

ಒಂದು ಊರಿನಲ್ಲಿ ಭೂಪಾಲನೆಂಬವನಿಗೆ ಆಗಾಗ ಆಸೆಯ ಕಾರಣದಿಂದ ಅಲ್ಪಬುದ್ಧಿ ಉಂಟಾಗುತ್ತಿತ್ತು. ಅಂತಲೇ ಆ ಊರಿನಲ್ಲಿ ನಡೆಯುವ ಮಿತ್ರನೊಬ್ಬನ ಮನೆಯ ಮದುವೆಗೆ ಹೋಗುವುದನ್ನು ತಪ್ಪಿಸಲು, ಏನೋ ಕೆಲಸದಲ್ಲಿ ಬೇರೆ ಊರಿಗೆ ಹೋಗಲು ನಿರ್ಧರಿಸಿ, ಬಾಡಿಗೆಗೆ ಗಾಡಿ ಮಾತಾಡಿ, ಬೆಳಗಾದ ಕೂಡಲೇ ಹೆಂಡತಿಯನ್ನು ಅವಸರಪಡಿಸುತ್ತ "ಎಷ್ಟು ಹೊತ್ತೇ? ಬೇಗ ಹೊರಡೇ. ಗಾಡಿಯವ ಆಗಲೇ ಬಂದು ಕಾದುಕೊಂಡಿದ್ದಾನೆ" ಎಂದು ಕೂಗಿ ಹೇಳಿದನು.

ಮೀನಾಕ್ಷಿಗೆ ಈ ಪ್ರಯಾಣವು ಸ್ವಲ್ಪವೂ ಇಷ್ಟವಿರಲಿಲ್ಲ. ಕಟ್ಟಿಕೊಂಡವನ ಒತ್ತಾಯಕ್ಕೆ ಉಪಾಯವಿಲ್ಲದೆ ಹೊರಡುತ್ತ "ಇವತ್ತು ಬೇಡಾಂದ್ರೆ ಕೇಳಿ, ಮದುವೆಗೇ ಹೋಗೋಣ. ಇಲ್ಲದಿದ್ದರೆ, ಚೆನ್ನಾಗಿರೋದಿಲ್ಲ." ಎಂದಳು.

"ನೀನೊಬ್ಬಳು ಏನೂ ತಿಳಿಯದ ಮೊದ್ದಿ. ಬೇಡವೇ ಬೇಡ. ಹೇಳಿದ್ದು ಕೇಳು. ಹಾಯಾಗಿ ನಗರಕ್ಕೆ ಹೋಗಿ ಬರಲೇಬೇಕು, ನಡೆ" ಎಂದನು ಭೂಪಾಲ ಹಟದಿಂದ.

ಮಾರನೇದಿನ ಸಾಯಂಕಾಲ ಅವನ ಮಿತ್ರನ ತಂಗಿಗೆ ಮದುವೆ. ಊರೊಳಗಿದ್ದರೆ ಅಲ್ಲಿಗೆ ಹೋಗಿ ಏನಾದರೂ ಬಹುಮಾನ ಕೊಡಲೇಬೇಕಾಗುತ್ತದೆ. ಅದೊಂದು ದಂಡಖರ್ಚು! ಅದರ ಬದಲಿಗೆ ನಗರಕ್ಕೆ ಹೋಗಿ ಸ್ವಲ್ಪ ಹಲ್ವಾವಾದರೂ ತಿಂದು ಬರಬಹುದು. ಹೀಗೆ ಆಲೋಚಿಸಿ ಅವನು ಆ ಮಿತ್ರನೊಂದಿಗೆ, ತನ್ನ ಮಾವಯ್ಯನಿಗೆ ಮೈಸರಿಯಿಲ್ಲವೆಂದು ಸುದ್ದಿ ಬಂದುದರಿಂದ, ಅವರ ಊರಿಗೆ ಹೋಗಲೇಬೇಕಾದ ಅಗತ್ಯಬಂತೆಂದು ಹೇಳಿಬಿಟ್ಟಿದ್ದನು.

ಇಷ್ಟವಿಲ್ಲದೆ ಪ್ರಯಾಣಕ್ಕೆ ತಯಾರಾಗುತ್ತಿದ್ದ ಹೆಂಡತಿಯ ಹತ್ತಿರಹೋಗಿ ಭೂಪಾಲನು, "ನೋಡೇ, ನಾಳೆಯಲ್ಲ, ನಾಡಿದ್ದಿಗೆ ನಮ್ಮ ಮದುವೆಯಾಗಿ ಒಂದು ವರ್ಷವಾಗುತ್ತದೆ. ನಗರದಿಂದ ಹೊಸ ಬಟ್ಟೆಗಳನ್ನೂ, ಒಳ್ಳೆಯ ಮಿಠಾಯಿಗಳನ್ನೂ ಕೊಂಡುಕೊಳ್ಳೋಣ. ಸುಮ್ಮನೆ ಮಿತ್ರನ ಮನೆಯ ಮದುವೆಗಾಗಿ ಏಕೆ ಹಣ ಖರ್ಚು ಮಾಡುವುದು? ಇದೀಗ ನಮಗೊಂದು ಒಳ್ಳೇ ಸಂದರ್ಭ ಅಂದುಕೋ," ಎಂದನು.

ಎಂ. ಕೆ. ಈಶ್ವರರಾವು



ಮೀನಾಕ್ಷಿಗೆ ಇದು ಅನ್ಯಾಯವೆಂದೇ ಅನಿಸು ತ್ತಿತ್ತು. ಆ ಸ್ನೇಹಿತನು ತಮ್ಮ ಮದುವೆಗೆ ಬೆಳ್ಳಿಯ ತಟ್ಟೆಯನ್ನು ಉಡುಗೊರೆ ಕೊಟ್ಟಿದ್ದನು. ಅದನ್ನು ಅವಳು ಗಂಡನಿಗೆ ನೆನಪು ಮಾಡಿದಳು.

"ಹೌದು,. ನನ್ನ ಮದುವೆಗೇನೋ ಕೊಟ್ಟಿದ್ದಾನೆ. ನನ್ನ ತಂಗಿಗ ಮದುವೆಯಾದಾಗ ಏನೂ ಕೊಟ್ಟಿಲ್ಲ ಗೊತ್ತಾ? ಆದ್ದರಿಂದ ನಾವು ಬಿಟ್ಟರೂ ಅವನೇನೂ ಅಂದುಕೊಳ್ಳಲಾರ. ಅವನು ಅಂಥವನಲ್ಲ" ಎಂದನು ಭೂಪಾಲ.

"ಬೇಕಂತ ನಾವು ಅವನ ಮನೆಯ ಮದುವೆಯನ್ನು ತಪ್ಪಿಸಲು ಹೋಗುತ್ತೇವೆ, ಹೌದಾ? ಈ ಸಂಗತಿ ಅವನಿಗೆ ಗೊತ್ತಾದರೆ ನಮ್ಮ ಮೇಲೆ ಅಸಹ್ಯ ಪಡುತ್ತಾನೆ" ಎಂದಳು ಮೀನಾಕ್ಷಿ.

"ಅವನಿಗೆ ಅಷ್ಟೆಲ್ಲಾ ಸೂಕ್ಷ್ಮಬುದ್ಧಿ ಇದ್ದರೆ ತಾನೆ? ಅವನ ಬುದ್ಧಿ ನನಗೆ ಗೊತ್ತು. ಶುದ್ಧ ಪೆದ್ದಪ್ಪ! ಆಲೋಚನೆ ಮಾಡುವ ತಲೆ ಅವನಿಗಿಲ್ಲ." ಎಂದು ಭೂಪಾಲನು ನಕ್ಕನು.

ಸಾಯಂಕಾಲದ ಹೊತ್ತಿಗೆ ಇಬ್ಬರೂ ಬಾಡಿಗೆ ಗಾಡಿಯಲ್ಲಿ ಕುಳಿತು ನಗರಕ್ಕೆ ಪ್ರಯಾಣ ಹೊರಟರು. ಬೆಳಗಾಗುವಾಗ ನಗರವನ್ನು ಸೇರಬಹುದೆಂದು ಅವರ ನಂಬುಗೆ. ಆದರೆ ಅರ್ಧದಾರಿ ಕ್ರಮಿಸುವಾಗ ಒಳ್ಳೆಯ ಮಳೆ ಹಿಡಿಯಿತು. ಮಳೆಯೊಂದಿಗೆ ಗಾಳಿಯೂ ಸೇರಿದ್ದರಿಂದ ಗಂಡಹೆಂಡಿರಿಬ್ಬರೂ ನೆನೆದು ಮುದ್ದೆಯಾದರು. ಅಷ್ಟರಲ್ಲಿ ಗಾಡಿಯ ಚಕ್ರವೊಂದು ಪಕ್ಕದ ಗುಂಡಿಗೆ ಜಾರಿಕೊಳ್ಳಲು ಎತ್ತು ಕಾಲುಜಾರಿ ಬದಿಗೊರಗಿತು.

ಗಾಡಿಯಾಳು ನಾನಾ ಪ್ರಯಾಸಪಟ್ಟು ಎತ್ತನ್ನು ನಿಲ್ಲಿಸಿದನು. ಚಕ್ರವನ್ನೂ ಗುಂಡಿಯಿಂದ ಎತ್ತಿದನು. ಎತ್ತಿನ ಒಂದು ಕಾಲು ಕುಂಟತೊಡಗಿ, ನೋವು ತಾಳಲಾರದೆ ಅದು ನೊಗದಿಂದ ತಪ್ಪಿಸಿಕೊಂಡು ಓಡಲು ಎಳೆದಾಡುತ್ತಿತ್ತು.

ಈ ಪರಿಸ್ಥಿತಿಯಲ್ಲಿ ಗಾಡಿಯವನು ಭೂಪಾಲ ನೊಂದಿಗೆ, "ಇನ್ನು ಈ ಗಾಡಿ ಕದಲುವಂತೆ ಕಾಣುವುದಿಲ್ಲ. ಅಲ್ಲಿ ಕಾಣುವ ಮರಗಳ ಆಚೆಗೆ ಒಂದು ಊರು ಇದೆ. ಇಲ್ಲೀವರೆಗೆ ತಂದುದಕ್ಕೆ ನನಗೆ ಅರ್ಧ ಬಾಡಿಗೆಕೊಟ್ಟು ಅಲ್ಲಿಗೆ ಹೋಗಿ, ಎಲ್ಲಿಯಾದರೂ ತಕ್ಕ ಜಾಗ ನೋಡಿ ರಾತ್ರಿ ಕಳೆಯಿರಿ" ಎಂದನು ಬೇಸರದಿಂದ.

ಬೇರೇನೂ ಮಾಡುವಂತಿರಲಿಲ್ಲವಾದುದರಿಂದ ಭೂಪಾಲನು ಗಾಡಿಯವನು ಹೇಳಿದಂತೆ ಹೆಂಡತಿ ಯೊಂದಿಗೆ ಆ ಮರಗಳ ಕಡೆಗೆ ಹೋದನು. ಸ್ವಲ್ಪ ದೂರದಲ್ಲಿ ಮಿಂಚಿನ ಬೆಳಕಿನಲ್ಲಿ ಕೆಲವು ಮನೆಗ ಳಿರುವುದು ಕಂಡಿತು. ಅಷ್ಟು ಹೊತ್ತಿಗೆ ರಾತ್ರಿ ಮೊದಲನೇ ಜಾಮ ಕಳೆದುದರಿಂದ ಎಲ್ಲಿಯೂ ದೀಪದ ಬೆಳಕು ಕಾಣಲಿಲ್ಲ.

ಭೂಪಾಲನು ದಾರಿಯ ಬದಿಯಲ್ಲಿದ್ದ ಒಂದು ಪಾಳು ಮನೆಯ ಜಗಲಿಯಲ್ಲಿ ಕುಕ್ಕರಿಸಿ "ಈ ರಾತ್ರಿ



ಕುಟಕಿತೋ ಎಂಬ ಹಾಗೆ ಕೆಟ್ಟದನಿಯಿಂದ ಅರಚಿದನು. ಅವನ ಮುಖವೂ ವಿಕಾರವಾಗಿಹೋಯಿತು.

ಆ ಜಗಲಿಯ ಮೇಲೆ ಸ್ವಲ್ಪ ದೂರದಲ್ಲಿ ಎರಡು ಪಿಶಾಚಿಗಳು ಕುಳಿತುಕೊಂಡಿದ್ದುವು. ಅವುಗಳು ಭೂಪಾಲನು ಹೇಳುವ ಮಾತುಗಳನ್ನು ಕಿವಿಗೊಟ್ಟು ಕೇಳುತ್ತಿದ್ದುವು.

"ಬೇಡಪ್ಪಾ, ನೀನು ನಮಗಿಂತ ಜೋರು ಅಂತ ಕೂಗಿ ತೋರಿಸುವಿಯಾ? ನಮ್ಮನ್ನು ನೋಡಿದ ಕೂಡಲೇ ಪಿಶಾಚಿಗಳು ಹೇಗೆ ಅರಚುತ್ತವೆಂದು ಅರಚಿ ತೋರಿಸಬೇಕೇ? ಅಬ್ಬೋ! ನಿನ್ನ ಕೂಗು ನಮ್ಮ ಗುಂಡಿಗೆಯನ್ನು ಒಡೆದು ಹಾಕುತ್ತದೆ. ನಿನ್ನ ಮಾತು ಕೇಳಿ ನಾವೇ ಕೂಗಬೇಕೆಂದಿದ್ದೆವು. ನಮ್ಮ ಗಂಟಲಲ್ಲಿ ಶಬ್ದವೇ ಬರಲಿಲ್ಲ!" ಎಂದುವು ಪಿಶಾಚಿಗಳು.

ಯನ್ನು ಇಲ್ಲಿಯೇ ಕಳೆದರಾಯಿತು. ರಾತ್ರಿಯಲ್ಲಿ ಊರೊಳಗೆ ಹೋದರೆ ಕಳ್ಳರು ಗಿಳ್ಳರು ಅಂದುಕೊಂಡಾರು" ಎಂದನು ಹೆಂಡತಿಗೆ.

ಮೀನಾಕ್ಷಿ ಮೆಲ್ಲನೆ ಬಂದು ಸುತ್ತಲೂ ನೋಡಿ, "ಇದು ಯಾವುದೋ ಜರಿದು ಬಿದ್ದ ಮನೆಯ ಹಾಗಿದೆ. ಇಂಥ ಮನೆಗಳೆಂದರೆ ಪಿಶಾಚಿಗಳಿಗೆ ಇಷ್ಟವಂತೆ. ಎಲ್ಲರೂ ಹೇಳುತ್ತಾರೆ" ಎಂದಳು, ಪಿಸುದನಿಯಿಂದ ನಡುಗುತ್ತ.

ಅವಳ ಮಾತು ಕೇಳಿ ಭೂಪಾಲನಿಗೆ ಭಯದಿಂದ ಮೈಬೆವರಿತು. ಆದರೆ ಹೆಂಡತಿಯ ಇದಿರಿನಲ್ಲಿ ಪುಕ್ಕನೆನಿಸಲು ಒಲ್ಲದೆ, ಬಿಂಕ ತಂದುಕೊಂಡು. "ಹುಚ್ಚೀ! ಪಿಶಾಚಿಗಳೆಂದರೆ ಯಾರಿಗೆ ಭಯ? ನನಗೋ? ನಾನು ಹದಿನಾರು ಪಿಶಾಚಿಗಳನ್ನು ಮಾರಣಹೋಮ ಮಾಡಿದ್ದೇನೆ! ಮೂವತ್ತೆರಡು ಭೂತಗಳನ್ನು ಭೂಸ್ಥಾಪನೆ ಮಾಡಿದ್ದೇನೆ. ನನ್ನನ್ನು ನೋಡಿದರೆ ಪಿಶಾಚಿಗಳು..." ಎಂದವನೇ, ಚೀಳು

ಪಿಶಾಚಿಗಳನ್ನು ನೋಡಿದ ಕೂಡಲೇ ಮೀನಾಕ್ಷಿ ಹೆದರಿ ಕೈಕಾಲುಗೆಟ್ಟಳು. ಭೂಪಾಲನ ನಾಲಗೆಯೂ ಕದಲಲಿಲ್ಲ. ಆದರೆ ಅವು ತಮ್ಮನ್ನು ನೋಡಿ ಹೆದರಿದುವೆಂದು ಭೂಪಾಲನಿಗೆ ಗೊತ್ತಾಯಿತು. ಅಂತಲೇ ಧೈರ್ಯ ತಂದುಕೊಂಡು, "ನನ್ನ ಇದಿರಿಗೆ ಬರಬೇಕಾದರೆ ಏನು ನಿಮ್ಮ ಧೈರ್ಯ!" ಎಂದನು ಕೋಪದಿಂದ.

"ಅಪ್ಪಾ! ನಮ್ಮ ಮೇಲೆ ಕೋಪಿಸಿಕೊಳ್ಳಬೇಡ. ನಮ್ಮನ್ನು ಏನೂ ಮಾಡದೆ ಸುಮ್ಮನೆ ಬಿಟ್ಟರೆ ನಿನಗೆ ನಾವು ತುಂಬಾ ಋಣಿಗಳಾಗಿರುತ್ತೇವೆ" ಎಂದಿತು ಎರಡನೇ ಪಿಶಾಚಿ.

ಇವು ಬುದ್ಧಿಯಿಲ್ಲದ ಪಿಶಾಚಿಗಳೆಂದು ಭೂಪಾಲನು ಅಂದುಕೊಂಡನು. "ಕಣ್ಣಿಗೆ ಬಿದ್ದ ಪಿಶಾಚಿಗಳನ್ನು ಸುಮ್ಮನೆ ಬಿಡುವುದು ನಮ್ಮ ಮನೆಯ ಆಚಾರಕ್ಕೆ ವಿರೋಧ. ನನ್ನ ಪದ್ಧತಿಯನ್ನು ಸುಮ್ಮನೆ ಬಿಡಬೇಕೆಂದರೆ ಹೇಗಾದೀತು?" ಎಂದನು ಭೂಪಾಲ.

"ಈ ಒಂದು ರಾತ್ರಿಯಲ್ಲಾದರೂ ಆ ಹಳೇ ಪದ್ಧತಿಯನ್ನು ಬಿಟ್ಟುಬಿಡಪ್ಪ! ಮರೆತುಬಿಡು! ಅದಕ್ಕೆ ಪ್ರತಿಫಲ ಕೊಡುತ್ತೇವೆ. ಚಿನ್ನ ಕೊಡುತ್ತೇವೆ. ಬೇರೇನೂ ನಮ್ಮ ಹತ್ತಿರ ಇಲ್ಲಪ್ಪ!" ಎಂದುವು ಪಿಶಾಚಿಗಳು.

ಭೂಪಾಲನು ಮನಸ್ಸಿನೊಳಗೆ ಸಂತೋಷ ಪಡುತ್ತ, ಮೇಲೆ ಕೋಪವನ್ನು ತೋರಿಸಿ, "ಆ ಚಿನ್ನವಾದರೂ ಎಲ್ಲಿದೆಯೋ ಹೇಳಿರಿ. ಚಿನ್ನಕ್ಕಾಗಿ ಅಲ್ಲದಿದ್ದರೂ ಚಿನ್ನದಂಥ ಮನಸ್ಸಿನ ನಿಮ್ಮನ್ನು ನೋಡಿದರೆ ಕನಿಕರ ಮೂಡುತ್ತದೆ" ಎಂದನು.

"ಆಹಾ! ದಯಾರ್ದ್ರಹೃದಯದ ಮಹಾ ಪ್ರಭೂ! ಹೀಗೆ ದಯಮಾಡಿ!" ಎಂದು ಆ ಪಿಶಾಚಿಗಳು ಅಲ್ಲಿಂದೆದ್ದು ಹೊರಟುವು.

ಭೂಪಾಲನು ಅವುಗಳ ಹಿಂದೆ ಹೋಗಲಿರುವುದನ್ನು ನೋಡಿ, ಮೀನಾಕ್ಷಿ ಹೆದರಿ, "ಬೇಡೀಂದ್ರೆ! ನನ್ನನ್ನು ಇಲ್ಲಿ ಬಿಟ್ಟು ನೀವು ಪಿಶಾಚಿಗಳ ಹಿಂದೇನಾ ಹೋಗುವುದು?" ಎಂದಳು.

"ಭಯ ಹೋಯಿತು ಬಿಡೇ ಹುಚ್ಚೀ! ಇವು ಯಾವುದೋ ಪುಕ್ಕಲು ಪಿಶಾಚಿಗಳು. ನಾನು ಹೋಗಿ ಅವು ಕೊಡುವ ಚಿನ್ನ ತಂದುಬಿಡುತ್ತೇನೆ. ನಿನಗೆ ಚಿನ್ನದ ಒಡ್ಯಾಣ, ಅಡ್ಡಿಗೆಗಳನ್ನು ಹಾಕ್ಕೊಳ್ಳುವ ಯೋಗ ವುಂಟು. ಯಾರು ತಡೆಯುತ್ತಾರೆ?" ಎಂದು ಹೇಳಿ ಭೂಪಾಲನು ಪಿಶಾಚಿಗಳ ಹಿಂದೆಯೇ ಹೋದನು.

ಹಾಳು ಕುಪ್ಪೆಗಳೂ, ಕಾಡು ಗಿಡಗಳೂ ಬೆಳೆದ ಒಂದು ಜಾಗನ್ನು ಪಿಶಾಚಿಗಳು ಭೂಪಾಲನಿಗೆ ತೋರಿಸಿ, "ಇಲ್ಲಿ ಅಗೆದು ಹೊರಲಿಕ್ಕೆ ಸಾಧ್ಯವಿದ್ದಷ್ಟು ಚಿನ್ನ ಎತ್ತಿಕೊಂಡು ಹೋಗಯ್ಯ. ನಮ್ಮನ್ನು ಏನೂ ಮಾಡದೆ ಬಿಟ್ಟದ್ದಕ್ಕೆ ಕೋಟಿ ನಮಸ್ಕಾರ" ಎಂದು ಹೇಳಿ ಮಾಯವಾಗಿ ಹೋದುವು.

ಭೂಪಾಲನು ಅಲ್ಲಿ ಬಿದ್ದಿದ್ದ ಒಂದು ಮರದ ಕೋಲನ್ನು ಎತ್ತಿಕೊಂಡು, ಮಳೆಯಿಂದ ನೆನೆದು ಮೆತ್ತಗಾದ ನೆಲವನ್ನು ಅಗೆಯತೊಡಗಿದನು.



ಒಂದು ಗಜದಷ್ಟು ಅಗೆದ ಕೂಡಲೇ, ಹೊಳೆಯುವ ಒಂದು ಚಿನ್ನದ ನಾಣ್ಯವು ಅವನ ಕೈಗೆ ಸಿಕ್ಕಿತು. ಅದನ್ನು ಬದಿಗಿರಿಸಿ, ಬೆರಳುಗಳಿಂದ ಕೆದಕಿ ನೋಡಿದನು. ಅನೇಕ ಚಿನ್ನದ ನಾಣ್ಯಗಳು ಕೈಗೆ ತಗಲಿದುವು.

ಸ್ವಲ್ಪ ಹೊತ್ತಿನಲ್ಲಿ ಭೂಪಾಲನ ಪಕ್ಕದಲ್ಲಿ ದೊಡ್ಡದೊಂದು ಚಿನ್ನದ ನಾಣ್ಯಗಳ ರಾಶಿಯೇ ಉಂಟಾಯಿತು. ಆದರೆ ಆಶೆ ತೊಲಗದೆ ಇನ್ನಿಷ್ಟು ಅಗೆಯುತ್ತಾ ಕುಳಿತನು. ಹೊತ್ತು ಹೋದುದೇ ಅವನಿಗೆ ತಿಳಿಯಲಿಲ್ಲ.

"ಯಾರದು ? ಏನದು ಕೆದಕುವುದು ?" ಎಂದು ಯಾರೋ ಕೇಳಿದ್ದು ಕೇಳಿ ಈ ಲೋಕಕ್ಕೆ ಬಂದನು. ಆಗ ಬೆಳಗಾಗುತ್ತಿದ್ದಿತು. ಗ್ರಾಮದ ಕಾವಲುಗಾರರು ಹಾಗೆ ಬಂದು ಕೇಳಿದ್ದರು.

ಭೂಪಾಲನು ತಟ್ಟನೆ ಹೆಗಲ ಮೇಲಿನ ಬಟ್ಟೆಯನ್ನು ನಾಣ್ಯದ ರಾಶಿಯ ಮೇಲೆ ಮುಚ್ಚಿದನು. ಕಾವಲುಗಾರರಲ್ಲೊಬ್ಬನು ಆ ಬಟ್ಟೆಯನ್ನು ಬದಿಗೆಳೆದು ನೋಡಿ "ಹಾ" ಎಂದು ಹಾರಿಬಿದ್ದನು. ಆ ರಾಶಿಯನ್ನು ನೋಡಿ ಭೂಪಾಲನ ಕಣ್ಣಿಗೂ ಕತ್ತಲೆ ಕವಿಯಿತು. ರಾತ್ರಿಯಲ್ಲಿ ತಾನು ಚಿನ್ನದ ನಾಣ್ಯಗಳೆಂದು ಭ್ರಮೆಪಟ್ಟುದೆಲ್ಲವೂ ಎಲುವುಗಳ ತುಂಡುಗಳು ! ತಾನಿರುವುದು ಸ್ಮಶಾನದಲ್ಲಿ. ಅಗೆದುದು ಯಾವುದೋ ಹಳೆಯ ಸಮಾಧಿಯನ್ನು ! ಗ್ರಾಮದ ಕಾವಲುಗಾರರು ಭೂಪಾಲನನ್ನು ಕೈ ಹಿಡಿದು ಎಳೆದುಕೊಂಡು ಹೋಗಿ ಗ್ರಾಮಾಧಿಕಾರಿಯ ಮುಂದೆ ನಿಲ್ಲಿಸಿದರು. ಈ ಗೊಡವೆಯನ್ನು ದೂರದಲ್ಲಿ ನೋಡುತ್ತಿದ್ದ ಮೀನಾಕ್ಷಿ ಅಳುತ್ತಾ ಗ್ರಾಮಾಧಿಕಾರಿಯೊಂದಿಗೆ ನಡೆದ ಸಂಗತಿಯನ್ನು ಹೇಳಿದಳು. ಭೂಪಾಲನ ಆಶಾಪಾತಕತನಕ್ಕೆ ಗ್ರಾಮಾಧಿಕಾರಿ ಛೀಮಾರಿ ಹಾಕಿದನು. ಅಲ್ಲಿಂದ ತಲೆ ತಗ್ಗಿಸಿಕೊಂಡು ಅವನು ಹೆಂಡತಿಯೊಂದಿಗೆ ಹಿಂದಿರುಗುವಾಗ, "ನೀವೇನೋ ಭಾರೀ ಬುದ್ಧಿವಂತರೆಂದುಕೊಂಡು ಸ್ನೇಹಿತನ ಮದುವೆಗೆ ಮೋಸ ಕೊಟ್ಟು, ಬಂದರೆ ಪಿಶಾಚಿಗಳು ನಿಮಗೆ ಮೋಸ ಕೊಟ್ಟುವು. ಇಷ್ಟು ಆಶೆ ಒಳ್ಳೇದಲ್ಲಪ್ಪ. ನೀವು ಅಂದುಕೊಂಡ ಹಾಗೆ ಅವು ಪುಕ್ಕಲು ಪಿಶಾಚಿಗಳೂ ಅಲ್ಲ, ಬುದ್ಧಿಯಿಲ್ಲದವೂ ಅಲ್ಲ ! ನಿಮ್ಮ ಕುಯುಕ್ತಿಗೆ ಅವುಗಳದು ಕುಯುಕ್ತಿಯಾಯಿತು ! ಇನ್ನಾದರೂ ನಾವು ಆ ಸ್ನೇಹಿತನ ಮದುವೆಗೇ ಹೋಗೋಣ ! ಚಿಂತೆ ಬಿಡಿ" ಎಂದಳು.

ಆದರಂತೆ ಬುದ್ಧಿ ತಂದುಕೊಂಡ ಭೂಪಾಲನು ಆದಿನ ಸಾಯಂಕಾಲ, ಒಳ್ಳೆಯ ಉಡುಗೊರೆಯನ್ನು ತೆಗೆದುಕೊಂಡು ಹೆಂಡತಿಯೊಂದಿಗೆ ಮಿತ್ರನ ಮನೆಯ ಮದುವೆಗೆ ಹೋದನು.





# ಅಡಿಗೆಯವನ ವೈದ್ಯ

**ಹಿಂ**ದೆ ರಾಮನಾಥನೆಂಬೊಬ್ಬ ದೊಡ್ಡ ಭೂಮಾಲಿಕನಿದ್ದನು. ಆತನ ಮನೆಯಲ್ಲಿ ಅಡಿಗೇ ಕೆಲಸಕ್ಕೆ ರಂಗಯ್ಯನೆಂಬವನಿದ್ದನು. ಅಡಿಗೆ ಮಾಡುವುದರಲ್ಲಿ ರಂಗಯ್ಯನು ಬಲು ಗಟ್ಟಿಗ. ಅವನ ಅಡಿಗೆಯ ಪಾಕಗಳೆಲ್ಲ ತುಂಬ ರುಚಿ.

ಒಂದುದಿನ ರಂಗಯ್ಯನು ಯಜಮಾನನೊಂದಿಗೆ, ತಾನು ಅಡಿಗೆಯ ಕೆಲಸವನ್ನು ಬಿಟ್ಟು ಮಗನ ಜತೆಯಲ್ಲಿ ಇರಲು ನಗರಕ್ಕೆ ಹೋಗುತ್ತೇನೆಂದು ಅಪ್ಪಣೆ ಕೇಳಿದನು.

ರಾಮನಾಥನು ಅವನನ್ನು ಕಳುಹಿಸಿಕೊಟ್ಟು. ಬೇರೆ ಅಡಿಗೆಯವರನ್ನು ವಿಚಾರಿಸಿಕೊಂಡಿರುವಾಗ, ಸುಬ್ಬಾಶಾಸ್ತ್ರಿ ಎಂಬವನು ಅಲ್ಲಿಗೆ ಬಂದು, "ಅಯ್ಯಾ ತಮಗೆ ಅಡಿಗೆಗೆ ಆಳುಬೇಕೆಂದು ಕೇಳಿದೆ. ನನಗೆ ಅಡಿಗೆ ಮಾಡುವುದರೊಂದಿಗೆ, ವೈದ್ಯಕೀಯವೂ ಗೊತ್ತಿದೆ" ಎಂದನು.

ಆ ಮಾತು ಕೇಳಿ ರಾಮನಾಥನು ಸಂತೋಷದಿಂದ, ವೈದ್ಯಕೀಯಬಲ್ಲ ಅಡಿಗೆಯವನು ಸಿಗುವುದು ಅದೃಷ್ಟ, ಎಂದುಕೊಂಡು, "ಸರಿ. ನಾಳೆಯಿಂದಲೇ ಕೆಲಸಕ್ಕೆ ಸೇರು" ಎಂದನು.

ಸುಬ್ಬಾಶಾಸ್ತ್ರಿ ಅಡಿಗೆಯವನಾಗಿ ಅಲ್ಲಿ ಸೇರಿ ಕೆಲಸ ಪ್ರಾರಂಭಿಸಿದನು. ಆತನ ಅಡಿಗೆ ರುಚಿಯಾಗಿಯೇ ಇದ್ದಿತು. ಆದರೆ ಮೂರು ದಿನಗಳಾದ ಮೇಲೆ ರಾಮನಾಥನಿಗೆ ಹೊಟ್ಟೇನೋವು ಶುರುವಾಯಿತು. ಅಡಿಗೆಯವನೊಂದಿಗೆ ಅದನ್ನು ಕುರಿತು ಹೇಳಿದನು.

ಸುಬ್ಬಾಶಾಸ್ತ್ರಿ ಮೂರು ಮದ್ದಿನ ಪೊಟ್ಟಣಗಳನ್ನು ಒಡೆಯರ ಕೈಗೆ ಕೊಟ್ಟು ಊಟವಾದ ಮೇಲೆ ಒಂದೊಂದು ಪೊಟ್ಟಣದ ಮದ್ದನ್ನು ತೆಗೆದುಕೊಳ್ಳುವಂತೆ ಹೇಳಿ, "ಅಯ್ಯಾ, ನಾನು ತಮ್ಮ ಹತ್ತಿರ ಅಡಿಗೆಯವನಾಗಿ ಮಾತ್ರ ಸೇರಿದ್ದೇನೆ. ವೈದ್ಯ ಮಾಡಿದ್ದಕ್ಕೆ ಪ್ರತ್ಯೇಕ ಪ್ರತಿಫಲ ಕೊಡಬೇಕಾದ್ದು ಧರ್ಮವಲ್ಲವೆ?" ಎಂದನು.

ರಾಮನಾಥನು ಮುಗುಳುನಗುತ್ತ, ಪೊಟ್ಟಣ ಒಂದಕ್ಕೆ ಒಂದು ರೂಪಾಯಿಯಂತೆ ಮೂರು ರೂಪಾಯಿಗಳನ್ನು ಸುಬ್ಬಾಶಾಸ್ತ್ರಿಗೆ ಕೊಟ್ಟನು. ಆ ಮೂರು ಪೊಟ್ಟಣಗಳ ಮದ್ದಿನಿಂದ ಯಜಮಾನನ ಅಜೀರ್ಣದ ಹೊಟ್ಟೆನೋವು ಮಾಯವಾಯಿತು.

ಮತ್ತೆ ಎಂಟು ದಿನಗಳ ಮೇಲೆ, ರಾಮನಾಥನಿಗೆ ವಿಪರೀತವಾದ ತಲೆನೋವಿನೊಂದಿಗೆ, ಶರೀರ

ನಡುಕವೂ ಶುರುವಾಯಿತು. ಆಗ ಸುಬ್ಬಾಶಾಸ್ತ್ರಿ ಮೂರು ಮದ್ದಿನ ಪೊಟ್ಟಣಗಳನ್ನು ಕೊಟ್ಟು ಮೂರು ರೂಪಾಯಿಗಳನ್ನು ಪಡೆದುಕೊಂಡನು.

ಆ ಮದ್ದು ಕೂಡಾ ಗುಣ ಕೊಟ್ಟಿತು. ರಾಮನಾಥನು ಸುಬ್ಬಾಶಾಸ್ತ್ರಿಯನ್ನು ತುಂಬಾ ಮೆಚ್ಚಿಕೊಂಡು, "ಅಲ್ಲಯ್ಯಾ, ನೀನು ಅಡಿಗೇ ಕೆಲಸ ಮಾಡುತ್ತ ಇಷ್ಟು ದೊಡ್ಡ ವೈದ್ಯನೂ ಆಗಿರುವೆಯಲ್ಲಾ ? ಹೇಗೆ? " ಎಂದು ಕೇಳಿದನು.

"ತನ್ನಂತೆ ಕಲಿತೆ ಸ್ವಾಮಿ. ಮನಸ್ಸಿದ್ದರೆ ಮಾರ್ಗ ಇದೆ" ಎಂದನು ಸುಬ್ಬಾಶಾಸ್ತ್ರಿ.

ಹೀಗೆ ಸುಬ್ಬಾಶಾಸ್ತ್ರಿಯು ಅಡಿಗೆಯನ್ನು ಉಣ್ಣುತ್ತಿದ್ದ ರಾಮನಾಥನಿಗೆ, ವಾರಕ್ಕೊಮ್ಮೆ, ಹತ್ತು ಹನ್ನೆರಡು ದಿನಗಳಿಗೊಮ್ಮೆ ಏನೋ ಒಂದು ರೋಗಬರುವುದೂ, ಸುಬ್ಬಾಶಾಸ್ತ್ರಿ ಹಣ ಪಡೆದು ಕೊಂಡು ಮದ್ದುಕೊಟ್ಟು ಗುಣಪಡಿಸುವುದೂ ಪರಿಪಾಟಿಯೇ ಆಯಿತು.

ಒಂದುದಿನ ಏನೋ ಆಲೋಚಿಸಿಕೊಂಡಿದ್ದ ರಾಮನಾಥನಿಗೆ ಆಕಸ್ಮಾತ್ತಾಗಿ ಅಡಿಗೆಯವನ ಮೇಲೆ ಅನುಮಾನ ಬಂತು. ಹಿಂದೆ ರಂಗಯ್ಯನು ಅಡಿಗೆಯವನಾಗಿದ್ದಾಗ ತನಗೆ ಎಂದೂ ರೋಗ ಬಂದುದೇ ಇಲ್ಲ. ಸುಬ್ಬಾಶಾಸ್ತ್ರಿ ಬಂದ ಮೇಲೆಯೇ ಅಜೀರ್ಣ, ತಲೆನೋವು, ಹೊಟ್ಟೆ ತೊಳಸುವಿಕೆ, ಕಣ್ಣುರಿ ಮುಂತಾದುವೆಲ್ಲ ಬರುತ್ತಿವೆ! ರಾಮನಾಥನು ಸುಬ್ಬಾಶಾಸ್ತ್ರಿಯು ಲೆಕ್ಕ ಚುಕ್ತಾಮಾಡಿ ಕೆಲಸದಿಂದ ತೆಗೆದುಹಾಕಿದನು. ಈ ಸಂಗತಿ ತಿಳಿದ ಮೇಲೆ ಮೂವರು ಅಡಿಗೆಯವರು ಕೆಲಸಕ್ಕಾಗಿ ಅವನ ಬಳಿಗೆ ಬಂದರು.

ರಾಮನಾಥನು ಆ ಮೂವರೊಂದಿಗೆ, "ಅಡಿಗೆ ಮಾತ್ರವಲ್ಲದೆ ವೈದ್ಯಕೀಯವೇನಾದರೂ ಗೊತ್ತಿದೆಯೋ ? " ಎಂದು ಪ್ರಶ್ನೆ ಮಾಡಿದನು.

ಅವರಲ್ಲಿ ಇಬ್ಬರು ಮಾತ್ರ ತಮಗೆ ಸ್ವಲ ಮಟ್ಟಿಗೆ ವೈದ್ಯಕೀಯ ಗೊತ್ತು ಅಂದರು. ಮೂರನೇ ಯವನು ತನಗೆ ವೈದ್ಯವೇನೂ ಗೊತ್ತಿಲ್ಲವೆಂದನು.

ರಾಮನಾಥನು ವೈದ್ಯಕೀಯ ಗೊತ್ತಿಲ್ಲವೆಂದು ಹೇಳಿದ ಅಡಿಗೆಯವನನ್ನೇ ಕೆಲಸಕ್ಕೆ ಸೇರಿಸಿ ಕೊಂಡನು. ಆತನ ಅಡಿಗೆ ಅವನಿಗೆ ಚೆನ್ನಾಗಿ ಹಿಡಿಸಿತು. ಎಲ್ಲದಕ್ಕಿಂತ ಮುಖ್ಯವೆಂದರೆ, ಈ ಅಡಿಗೆಯವನು ಬಂದ ಮೇಲೆ ರಾಮನಾಥನಿಗೆ ಯಾವ ರೋಗವೂ ಬರಲಿಲ್ಲ. "ಸುಬ್ಬಾಶಾಸ್ತ್ರಿ ಅಡಿಗೆ ಯನ್ನು ವ್ಯಾಪಾರವಾಗಿಯೂ, ವೈದ್ಯಕೀಯವನ್ನು ವೃತ್ತಿಯನ್ನಾಗಿಯೂ ಮಾಡಿಕೊಂಡವನು. ಈ ಅನುಮಾನ ಮೊದಲೇ ನನಗೆ ಬಂದಿದ್ದರೆ ಅನೇಕ ರೋಗಗಳ ಮಾದರಿ ನೋಡಬೇಕಾಗಿರಲಿಲ್ಲ" ಎಂದುಕೊಂಡನು ರಾಮನಾಥ.





# ವಿಘ್ನೇಶ್ವರ

ಒಂದುಸಾರಿ ವಿನಾಯಕ ಚೌತಿಯದಿನ, ಮುಸ್ಸಂಜೆಯ ವೇಳೆಯಲ್ಲಿ ವಿಘ್ನೇಶ್ವರನು ಪಶ್ಚಿಮಾಕಾಶವನ್ನು ನೋಡುತ್ತಿದ್ದನು. ತನ್ನ ದಂತದ ಹಾಗೆಯೇ ವಕ್ರವಾಗಿರುವ ರೇಖಾಚಂದ್ರನನ್ನು ನೋಡುತ್ತ, ತನ್ನ ಬೊಜ್ಜನ್ನು ತಡವಿಕೊಂಡು, ಇತ್ತಿಂದತ್ತ ಅತ್ತಿಂದಿತ್ತ ತಿರುಗುತ್ತ ಆ ದಿನದ ಹಬ್ಬದೂಟದ ತನ್ನ ಭುಕ್ತಾಯಾಸವನ್ನು ಪರಿಹರಿಸುತ್ತಿದ್ದನು. ಇಲಿಕೂಡಾ ಅವನ ಹಿಂದೆಯೇ ಓಡಾಡಿಕೊಂಡಿತ್ತು. ಅದಕ್ಕೂ ಭುಕ್ತಾಯಾಸವೇ.

ಚೌತಿಚಂದ್ರನನ್ನು ವಿಘ್ನೇಶ್ವರನ ಸಂಕೇತವೆನ್ನುತ್ತಾರೆ. ವಿಘ್ನೇಶ್ವರನ ನೊಸಲಿನಲ್ಲಿ ಬಿಳಿಯ ಗಂಧದಿಂದ ತಿದ್ದಲ್ಪಟ್ಟ ಬಾಲಚಂದ್ರ ತಿಲಕವು ಆಕಾಶದಲ್ಲಿರುವ ಚೌತಿಚಂದ್ರನ ಪ್ರತಿಬಿಂಬದಂತೆ ಪ್ರಕಾಶಿಸುತ್ತಿತ್ತು. ಫಾಲಚಂದ್ರನೆಂದೂ ಬಾಲಚಂದ್ರನೆಂದೂ ವಿಘ್ನೇಶ್ವರನಿಗೆ ಹೆಸರುಗಳಿವೆ.

ಹೀಗೆ ಎಡತಾಕುವ ವಿಘ್ನೇಶ್ವರನ ಕಾಲಿನ ಹೆಬ್ಬೆರಳಿಗೆ ಒಂದು ಕಲ್ಲು ತಗಲಿ ವಿನಾಯಕನು ಒಮ್ಮೆಗೇ ಬೋರಲು ಬಿದ್ದನು. ಬಿದ್ದ ಕ್ಷಣದಲ್ಲಿಯೇ ಅವನ ಬೊಜ್ಜು ಹೊಟ್ಟೆ ಒಡೆದುಬಿಟ್ಟಿತು. ತಿಂದ ತಿಂಡಿಗಳು ನೆಲದ ಮೇಲೆ ಹೊರಳಿ ಹರಡಿದುವು. ಆ ಕೂಡಲೇ ಅವನ ಇಲಿ ಓಡಿಬಂದು ಅವುಗಳನ್ನು ಆರಿಸಿ ಗಬಗಬನೆ ತಿನ್ನತೊಡಗಿತು.

ಆಕಾಶದಲ್ಲಿ ಕಿರುನಗೆಯಂತೆ ಪ್ರಕಾಶಿಸುವ ಚಂದ್ರನು ಈ ವಿನೋದವನ್ನು ನೋಡಿ ಕಿಟಕಿಟನೆ ನಕ್ಕನು. ದೇವತೆಗಳೆಲ್ಲಾ ಗಾಬರಿಬಿದ್ದು ಓಡಿಬಂದು ಸಮೀಪದಲ್ಲಿದ್ದ ದೊಡ್ಡದೊಂದು ಸರ್ಪದಿಂದ ವಿನಾಯಕನ ಒಡೆದ ಹೊಟ್ಟೆಯನ್ನು ಸೇರಿಸಿ ಬಿಗಿದು ಹೊಲಿದರು.

ಇನ್ನೂ ನಗುತ್ತಿದ್ದ ಚಂದ್ರನನ್ನು ನೋಡಿ ಪಾರ್ವತಿಗೆ ಬಹಳ ಕೋಪಬಂದಿತು. "ವಿನಾಯಕನ ಚೌತಿಯದಿನ ಚಂದ್ರನನ್ನು ನೋಡಿದವರಿಗೆ ವೃಥಾ ಅಪನಿಂದೆ ಬಂದು ಬೀಳಲಿ!" ಎಂದು ಶಪಿಸಿದಳು.

ಅಂದಿನಿಂದ ಜನರು ಚೌತಿಯದಿನ ಮಕ್ಕಳನ್ನು ಕೂಡಾ ಚಂದ್ರನು ಕಾಣಿಸದಂತೆ ಎಚ್ಚರಿಕೆಯಿಂದ ನೋಡಿಕೊಳ್ಳ ತೊಡಗಿದರು.

೧೨. ಕೃಷ್ಣ ವಿನಾಯಕೀಯ




ದ್ವಾಪರಯುಗವು ಬಂದಿತು. ಕೃಷ್ಣನು ದೇವಕೀ ವಸುದೇವರ ಮಗನಾಗಿ ಸೆರೆಮನೆಯೊಳಗೆ ಹುಟ್ಟಿ, ಗೋಕುಲಕ್ಕೆ ಒಯ್ಯಲ್ಪಟ್ಟು, ಯಶೋದೆಯ ಮುದ್ದು ಮಗನಾಗಿ ಬೆಳೆಯುತ್ತ, ಪೂತನಿ, ಶಕಟಾಸುರ, ತೃಣಾವರ್ತ ಮೊದಲಾದ ರಾಕ್ಷಸರನ್ನು ಬಾಲ ಲೀಲೆಗಳಿಂದಲೇ ಕೊಂದನು. ಚೆನ್ನಾಗಿ ಮಾತೂ ಕಲಿತನು. ಎಣೆಯಿಲ್ಲದ ಲೀಲೆ ಕೃಷ್ಣನದು.

ವರ್ಷಾವರ್ಷದಂತೆ ವಿನಾಯಕಚೌತಿ ಬಂದಿತು. ಯಶೋದೆ ಹಾಲು ಹಿಂಡುತ್ತಿದ್ದಳು. ಕೃಷ್ಣನು ಯಶೋದೆಯ ಬೆನ್ನಿನಮೇಲೆ ಒರಗಿ ಬಾಗಿ, ಪಾತ್ರದ ಹಾಲಿನಲ್ಲಿ ಪ್ರತಿಬಿಂಬಿಸಿದ ರೇಖಾಚಂದ್ರನನ್ನು ನೋಡಿ. "ಚಂದಮಾಮ! ಚಂದಕ್ಕಿಮಾಮಾ! ಚಂದೊಳ್ಳೇಮಾಮಾ! ಚಂದಮಾಮ ಹಾಲುಮಾಮಾ ಆಗಿ ಕುಡೀತಾ ಇದ್ದಾನೇ!" ಎನ್ನುತ್ತ ಹಾರಿ ಹಾರಿ ಚಪ್ಪಾಳೆ ತಟ್ಟಿದನು. ಯಶೋದೆ ಗಾಬರಿ ಬಿದ್ದು. "ಅಯ್ಯೋ! ಎಂಥಾ ಕೆಲಸಮಾಡಿದಿಯೋ ಕೃಷ್ಣಾ! ಇವತ್ತು ಚಂದ್ರನ್ನ ನೋಡಿ ಬಿಟ್ಟೆಯಾ? ನಿಂಗೆ ವೃಥಾಪನಿಂದೆ ಬರುತ್ತಲ್ಲಪ್ಪಾ!" ಎಂದು ನೊಂದುಕೊಂಡಳು.

"ವೃಥಾಪನಿಂದೆ ಅಂದರೆ ಏನಮ್ಮಾ ಅದು?" ಎಂದು ಕೇಳಿದನು ಕೃಷ್ಣ.

"ಸುಮ್ಮ ಸುಮ್ಮನೆ ನಿನ್ನನ್ನು ಕಳ್ಳಾ ಅನ್ನುತ್ತಾರಪ್ಪಾ" ಎಂದಳು ಯಶೋದೆ.

"ಅದಕ್ಕಾಗಿ ಚಿಂತಿಸಬೇಡಮ್ಮಾ. ನಾನು ಹಾಲು, ಮೊಸರು, ಬೆಣ್ಣೆ ಕದ್ದುಕೊಳ್ತೇನೆ. ಆಗ ಅದು ವೃಥಾಪವಾದ ಆಗದಪ್ಪೆ?" ಎಂದನು ಕೃಷ್ಣ. ಗೋಪಮ್ಮ ಹುಸಿಗೋಪದಿಂದ ಅವನ ಗಲ್ಲ ಚಿವುಟಿ, "ಏ ಸಿಡಿಲು ಮರೀ! ನಿನ್ನ ಬಾಯೊಳಗೆ ಬ್ರಹ್ಮಾಂಡ ಬೀಳ!" ಎಂದಳು.

"ಬ್ರಹ್ಮಾಂಡ ನೋಡಿದ್ದೀಯೂ ಅಮ್ಮಾ?" ಎಂದು ಹೊಸಪ್ರಶ್ನೆ ಹಾಕಿದನು ಕೃಷ್ಣ.

"ಸಾಕು ಬಾಯಿಮುಚ್ಚು! ಹೀಗೆ ಅಧಿಕಪ್ರಸಂಗಿಯಾದರೆ ದೊಡ್ಡವನಾದ ಮೇಲೆ ನಿನ್ನ ತಲೇಮೇಲೆ ಬೇಡದ್ದೆಲ್ಲಾ ಬಂದು ಬೀಳುತ್ತೆ!" ಎಂದು ಬಾಲ ಕೃಷ್ಣನ ತಲೇಮೇಲೆ ಒಂದು ಮೊಟ್ಟೆಕಾಯಿ ಕುಟ್ಟಿದಳು ಯಶೋದೆ.

"ಸುಮ್ಮನೆ ಯಾಕೆ ಬೀಳುತ್ತೇ? ಆಗ ಮತ್ತೆ ಹೀಗೆಯೇ ಚಂದಮಾಮನ್ನ ನೋಡಬೇಕು, ಅಲ್ಲವೇ ಅಮ್ಮ?" ಎಂದು ಕೇಳಿದನು ಕೃಷ್ಣ.

"ದೊಡ್ಡವನಾದ ಮೇಲೆ ನೋಡಿದರೆ ಮತ್ತೂ ದೊಡ್ಡ ತಪ್ಪು!" ಎಂದು ಯಶೋದೆ ಮನಸ್ಸಿನಲ್ಲಿ, "ವಿಘ್ನೇಶಾ! ಶುಭಾಶುಭ ತಿಳಿಯದ ಹಸುಕಂದ, ನೆರಳು ಮಾತ್ರವೇ ನೋಡಿದ. ಕ್ಷಮಿಸಿಬಿಡು ಸ್ವಾಮಿ" ಎಂದು ಪ್ರಾರ್ಥಿಸಿಕೊಂಡಳು.

ಮಾರಣೇದಿನ ಹುಡುಗರೆಲ್ಲ ಆಡುತ್ತಿದ್ದಾಗ ಬಲರಾಮನು ಗುಡುಗುಡು ಓಡಿಬಂದು, ಯಶೋದೆಯೊಂದಿಗೆ, "ಅಮ್ಮಾ, ತಮ್ಮ ಮಣ್ಣು ತಿನ್ನುತ್ತಾ ಇದ್ದಾನೆ. ಎಷ್ಟು ಹೇಳಿದರೂ ಕೇಳೋದಿಲ್ಲ! ನೀನೇ

ಹೇಳಬೇಕು ಬುದ್ಧಿ. ಸುಳ್ಳಲ್ಲ, ಬೇಕಾದರೆ ಈಗಲೇ ಬಂದು ನೋಡು!" ಎಂದನು. ಯಶೋದೆ ಬಿಟ್ಟದ್ದು ಬಿಟ್ಟು ಹೊರಗೆ ಓಡಿದಳು.

ಕೃಷ್ಣನು ಮಣ್ಣು ಮುದ್ದೆಗಳನ್ನು ಮಾಡಿ ಸಾಲು ಸಾಲಾಗಿ ಇಡುತ್ತಿದ್ದನು. ಯಶೋದೆ ಅವನ ಕಿವಿ ಹಿಡಿದು "ಎಲ್ಲಿ ಬಾಯಿ ತೆರೆ!" ಎಂದಳು ಸಿಟ್ಟಿನಿಂದ.

"ಇಲ್ಲಮ್ಮಾ! ನನ್ನನ್ನು ನಿನ್ನಿಂದ ಪೆಟ್ಟುತಿನ್ನಿಸಲು ಯಾರೋ ಚಾಡಿ ಹೇಳಿದ್ದಾರೆ. ವೃಥಾಪನಿಂದೆ ಬರುತ್ತದೆ ಅಂತ ನಿನ್ನೆ ತಾನೇ ನೀನು ಹೇಳಿದಿ? ಮಣ್ಣಿನಿಂದ ನಾನು ಉಂಡೆಗಳನ್ನೂ ಲಡ್ಡುಗಳನ್ನೂ ಮಾಡ್ತಾ ಇದ್ದೆ ಅಷ್ಟೇ. ಮಣ್ಣು ಮುದ್ದೆಯಿಂದ ಮಾಡಿದ ವಿನಾಯಕನಿಗೆ ಮಣ್ಣಿನ ತಿಂಡಿಗಳಾದ ರೇನೇ ನಿಜವಾಗಿಯೂ ತಿನ್ನುತ್ತಾನೆ. ಅಲ್ಲವೇ ಅಮ್ಮ?" ಎಂದನು ಕೃಷ್ಣ.

ಯಶೋದೆ "ತಪ್ಪು ತಪ್ಪು" ಎಂದು ಗಲ್ಲ ಬಡಿದು ಕೊಂಡು "ಹಾಗೆಲ್ಲಾ ಹೇಳಬಾರದೋ ಕಂದಾ! ದೊಡ್ಡ ತಪ್ಪು. ಮಣ್ಣಿನಲ್ಲಿ ಮಾಡಿದರೂ ಕಲ್ಲಿನಲ್ಲಿ ಕೆತ್ತಿದರೂ ದೇವರುದೇವರೇ. ಸ್ವಾಮೀ ವಿನಾಯಕಾ! ಈ ಹುಡುಗನ ಮಾತನ್ನು ಹಿಡಿಸಿಕೊಳ್ಳ ಬೇಡಪ್ಪಾ!" ಎಂದು ಧ್ಯಾನಿಸಿಕೊಂಡಳು.

"ಹಾಗಾದರೆ ಮುಂದಿನ ವಿನಾಯಕ ಚೌತಿಗೆ ಬೆಣ್ಣೆದು ಉಂಡ್ಲುಕ, ತುಪ್ಪದಲಡ್ಡು ತುಂಬಾ ಮಾಡಿಬಿಡಮ್ಮಾ. ಎಷ್ಟು ತಿನ್ನುತ್ತಾನೋ ನೋಡ ಬೇಕು. ತಿನ್ನದೇ ಬಿಟ್ಟರೆ ನಾನೇ ತಿನ್ನಿಸುತ್ತೇನೆ. ಹುಂ" ಎಂದನು ಕೃಷ್ಣ.

"ಹರಟೆ ಸಾಕು! ಮೊದಲು ನಿನ್ನ ಬಾಯಿ ತೋರಿಸು." ಎಂದು ಯಶೋದೆ ಬಗ್ಗಿ ನೋಡಲು, ಕೃಷ್ಣನು "ಆ" ಎಂದು ಬಾಯಿ ಪೂರಾ ತೆರೆದನು.

ಯಶೋದೆ ಹಾಗೆ ನೋಡುತ್ತಾ ಮೂಕವಿಸ್ಮಿತಳಾದಳು. ಅವಳ ಮೈಬೆವರುತ್ತಿರಲು ಚಕ್ಕನೆ ಕುಳಿತಳು. ಕೃಷ್ಣನ ಬಾಯಿಯೊಳಗೆ ಬ್ರಹ್ಮಾಂಡ




ಗಳು, ನಕ್ಷತ್ರ ಮಂಡಲಗಳು, ಸೂರ್ಯ ಚಂದ್ರರು, ಸಮುದ್ರಗಳು, ಪರ್ವತಗಳು ಸಮಸ್ತವೂ ಕಂಡು ಬಂದುವು. ಹಸುವಿನಹಾಲು ಹಿಂಡುವ ಯಶೋದೆಯ ಬೆನ್ನಿನ ಮೇಲೆ ಬಾಗಿ, ಅವಳ ಕೊರಳನ್ನು ಪುಟ್ಟಕೈಗಳಿಂದ ಬಳಸಿರುವ ಕೃಷ್ಣನು, ಹಾಲಿನ ಪಾತ್ರದಲ್ಲಿ ಚಂದ್ರನನ್ನು ನೋಡುವ ದೃಶ್ಯವನ್ನೂ ಯಶೋದೆ ನೋಡಿದಳು. ಸ್ವಪ್ನವೇನೋ ಎಂದು ಕೊಂಡು ತನ್ನನ್ನು ಚಿವುಟಿಕೊಂಡಳು. ಕಣ್ಣುತಿಕ್ಕಿ ಕೊಂಡಳು. ತಾನು ನಿದ್ದೆಯಲ್ಲಿ ಸ್ವಪ್ನ ಕಾಣುವುದಲ್ಲ. ಯಾವ ದೇವನೋ, ವಿನಾಯಕನೋ ತನ್ನನ್ನು ಮಾಯದಲ್ಲಿ ಅದ್ದಿ ಅದ್ದಿ ಎತ್ತುತ್ತಿದ್ದಾನೆ! ಸುತ್ತು ಮುತ್ತೂ ಕಣ್ಣು ಬಿಡಿಸಿ ಬಿಡಿಸಿ ನೋಡಿದಳು. ಯಶೋದೆಯ ಹುಚ್ಚು ನೋಟನೋಡಿ ಸುತ್ತಲೂ ಸೇರಿದ ಮಕ್ಕಳು ಕೇಕೇಹಾಕಿ ನಗುತ್ತಿದ್ದರು. ಕಂಬದ ಮರೆಯಲ್ಲಿ ನಿಂತುಕೊಂಡು ಹಣಕಿ ನೋಡುತ್ತ ಬಲರಾಮನೂ ನಗುತ್ತಿದ್ದಾನೆ!



ಕೃಷ್ಣನು ಯಶೋದೆಯ ಮುಖದಕಡೆಗೆ ಬಗ್ಗಿ, "ನೋಡಮ್ಮಾ ಬಾಯಿನೋಡು! ಮಣ್ಣು ಕಂಡಿ ತೇನು? ಚೆನ್ನಾಗಿ ನೋಡಿ ಮತ್ತೆ ಹೇಳಮ್ಮಾ!" ಎನ್ನುತ್ತ. ತೆರೆದ ಬಾಯಿಯನ್ನು ಅವಳ ಹತ್ತಿರವೇ ತಂದನು. ಈಗ ಯಶೋದೆಗೆ ದೇವಾದಿ ದೇವತೆ ಗಳೆಲ್ಲಾ ಕಾಣಿಸಿದರು. ಕೃಷ್ಣನು ಕೊಳಲೂದುತ್ತಿ ರಲು, ವಿಘ್ನೇಶ್ವರನು ತಾಂಡವ ನೃತ್ಯಮಾಡುತ್ತಿ ದ್ದಾನೆ! ಕೃಷ್ಣನು ದೊಡ್ಡದೊಂದು ಕರಿಯ ಸರ್ಪದ ತಲೆಯ ಮೇಲೆ ತುಳಿದಾಡುತ್ತಿರುವುದನ್ನೂ, ಆ ಸರ್ಪವು ಕೃಷ್ಣನನ್ನು ಸುತ್ತು ಹಾಕುವುದನ್ನೂ ನೋಡಿ ಯಶೋದೆ ಕಿಟ್ಟನೆ ಕಿರಿಚಿದಳು. ಹಾಗೆಯೇ ಮೂರ್ಛೆಹೋಗಿ ಬಿದ್ದಳು! ಆಕೆ ಮತ್ತೆ ಕಣ್ಣು ತೆರೆದಾಗ ಅವಳು ಮಂದಿರದೊಳಗೆ ಮಂಚದಲ್ಲಿ ಮಲಗಿದ್ದಳು. ಅವಳ ಸುತ್ತಲೂ ಗೊಲ್ಲಭಾಮೆಯರು ನೆರೆದಿದ್ದರು. "ನೀವೆಲ್ಲಾ ಏಕೆ ಬಂದಿರಿ? ನನಗೇನಾಗಿದೆ?" ಎಂದು ಆಶ್ಚರ್ಯದಿಂದ ಕೇಳಿದಳು ಯಶೋದೆ. ಅವಳಿಗೆ ನಡೆದುದಾವುದೂ ನೆನೆಪಿಗೆಬರಲಿಲ್ಲ. ಎಲ್ಲವನ್ನೂ ಮರೆತಿದ್ದಳು. ತಲೆ ತಿರುಗಿಸಿ ಸುತ್ತಲೂ ನೋಡಿದಳು.

"ನಿನಗೇನಾಯಿತೆಂದು ನಮಗೇನು ಗೊತ್ತಮ್ಮಾ? ನಮ್ಮ ಮನೆಗಳಲ್ಲಿ ತುಂಬಾ ಕಳ್ಳತನಗಳು ನಡೆದು ಬಿಟ್ಟಿವೆ. ಆ ಕಳ್ಳಯಾರೆಂತಲೂ ಗೊತ್ತಾಯಿತು. ಆ ನಿನ್ನ ಮುದ್ದುಮಗನೇ. ಹಾಲು, ಅದರ ಕೆನೆ, ಬೆಣ್ಣೆ, ಮೊಸರು ಎಲ್ಲಾ ಇಷ್ಟಬಂದಹಾಗೆ ತುಂಟ ಪೋಲಿಗಳಿಗೂ, ಕೋತಿಗಳಿಗೂ ಹಂಚಿ ಹಂಚಿ, ಕೊಡುವುದನ್ನು ನಾವು ಕಣ್ಣಾರೆ ಕಂಡೆವು. ಅದನ್ನು ಮೊರೆಯಿಡಲಿಕ್ಕೇ ಬಂದಿದ್ದೇವೆ. ನಿನ್ನ ಹತ್ತಿರ ಹೇಳಿ ಏನಾದೀತು? ಮುದ್ದಿನ ಮಗನಿಗೆ ಚಿವುಟಲಿಕ್ಕೂ ನಿನ್ನಿಂದಾಗದು." ಎಂದರು ಗೋಪಿ ಕಾಂತೆಯರು.

"ಏನಂದಿರಿ? ಅವೆಲ್ಲಾ ನಿಮ್ಮ ಮನೇದೇ ಅಂತ ಹೇಗೆ ಹೇಳುವಿರಿ? ನಮ್ಮ ಮನೆಯಲ್ಲಿ ಅವೇನೂ ಇಲ್ಲವೆಂದುಕೊಂಡಿರಾ? ಗೋಕುಲದ ಎಲ್ಲಾ ಮನೆ ಗಳಲ್ಲಿರುವ ಹಾಲುಬೆಣ್ಣೆಗಳನ್ನು ಕೂಡಿಸಿದರೂ ನಮ್ಮ ಮನೆಯಲ್ಲಿರುವುದರ ಅರ್ಧದಷ್ಟೂ ಇರಲಾ ರದು. ನಡೆಯಿರಿ, ನಡೆಯಿರಿ!" ಎಂದು ಬಯ್ದು ಅವರನ್ನೆಲ ಕಳುಹಿಸಿ ಬಿಟ್ಟಳು ಯಶೋದೆ.

ಕೃಷ್ಣನು ಮೆಲ್ಲನೆ ಅಲ್ಲಿಗೆ ಬಂದು "ಏನು ನಡೆಯಿತು ಅಮ್ಮಾ?" ಎಂದು ಕೇಳಿದನು.

"ಏನು ನಡೆಯುತ್ತದೇದು ಹೇಳಿದೇನೋ ಅದೇ ನಡೆಯಿತು. ನಿನ್ನ ಮೇಲೆ ವೃಥಾಪವಾದ ಬಂದು ಬಿದ್ದೇ ಬಿಟ್ಟಿತು!" ಎಂದಳು ಯಶೋದೆ.

"ಅಂಥಾ ಅಪನಿಂದೆಯನ್ನೆಲ್ಲಾ ನಾನು ತಪ್ಪಿಸಿ ಕೊಂಡೆನಮ್ಮ. ಅದೇ ಅವರೆಲ್ಲಾ ಈಗ ನಿನ್ನ ಹತ್ತಿರ ಬಂದು ಹೇಳಿದರಲ್ಲಾ? ಅದೆಲ್ಲಾ ನಿಜವೇ! ಚಿಂತಿಸ ಬೇಡ!" ಎಂದನು ಕೃಷ್ಣ.

ಯಶೋದೆಗೆ ಬಹು ಕೆಟ್ಟಕೋಪ ಬಂದಿತು. ಹಗ್ಗದಿಂದ ಕೃಷ್ಣನ ಕಾಲುಕಟ್ಟಿ, ಹಗ್ಗದ ಇನ್ನೊಂದು

ತಂದಿಯನ್ನು ದೊಡ್ಡದೊಂದು ಒರಳಿಗೆ ಕಟ್ಟಿದಳು. ಕೃಷ್ಣನು ಆ ಒರಳನ್ನು ಎಳೆಯುತ್ತಾ ಜಂಟಿಮರಗಳ ಸಂದಿನಲ್ಲಿ ತೂರಿಕೊಂಡು ಹೋಗಿ ಒರಳನ್ನೂ ಅವುಗಳೆಡೆಯಿಂದಾಗಿ ಎಳೆದನು. ಆ ಎರಡು ಮಹಾವೃಕ್ಷಗಳೂ ಬೇರಿನೊಂದಿಗೆ ಮುಗುಚಿ ಬಿದ್ದು. ಮಾಯವಾಗಿ ಇಬ್ಬರು ಗಂಧರ್ವರು ಪ್ರತ್ಯಕ್ಷರಾದರು. ಹಾಗೆ ಜಂಟಿಮರಗಳಾದ ನಳಕೂಬರರೆಂಬ ಗಂಧರ್ವರ ಶಾಪವಿಮೋಚನೆಯಾಗಿ, ಕೃಷ್ಣನನ್ನು. ಸ್ತುತಿಸಿ ಆಕಾಶಕ್ಕೆ ಹಾರಿ ಅದೃಶ್ಯರಾದರು.



ಮತ್ತೊಂದು ವರ್ಷಕಳೆದು ಮತ್ತೆ ವಿನಾಯಕ ಚೌತಿ ಬಂದಿತು. ಸುಂದರವಾದ ದೊಡ್ಡ ಬಣ್ಣದ ವಿನಾಯಕ ವಿಗ್ರಹವನ್ನು ನಂದಗೋಪನು ಮಾಡಿಸಿದನು. ಯಶೋದೆ ಕೆನೆಯನ್ನೂ ಬೆಣ್ಣೆಯನ್ನೂ ಸೇರಿಸಿ ಹಿಟ್ಟು ಕಲಸಿ, ಬಗೆಬಗೆಯ ಉಂಡೆ, ಅಪ್ಪ, ಸುಳಿಗಡುಬು, ಮೋದಕ, ಉಸಳಿ, ಕರಜೀಕಾಯಿ ಮುಂತಾದ ಭಕ್ಷ್ಯಗಳನ್ನು ತುಂಬಾ ಮಾಡಿದಳು.

ಆ ನೈವೇದ್ಯ ಪದಾರ್ಥಗಳನ್ನೆಲ್ಲ ಪೂಜಾಮಂದಿರದಲ್ಲಿಟ್ಟು, ಸುಮ್ಮನೆ ಬಾಗಿಲು ಸರಿಸಿ ಯಶೋದೆ ಆಚೆಗೆ ಹೋದಳು.

ಕೃಷ್ಣನು ಮೆಲ್ಲನೆ ಸದ್ದುಮಾಡದೆ ಪೂಜಾಮಂದಿರದೊಳಗೆ ಪ್ರವೇಶಿಸಿ, ಬಾಗಿಲನ್ನು ಮುಚ್ಚಿ, ಅಲ್ಲಿ ಇರಿಸಿದ್ದ ಭಕ್ಷ್ಯ ಭೋಜ್ಯಗಳನ್ನೆಲ್ಲಾ ವಿನಾಯಕನ ವಿಗ್ರಹದ ಬಾಯಿಗೆ ನೀಡುತ್ತ, "ತಿನ್ನಯ್ಯಾ ತಿನ್ನು!" ಎಂದು ಅವನ ಬೊಜ್ಜು ಹೊಟ್ಟೆಯನ್ನು ತಡವಿದನು.

ವಿಗ್ರಹವು ಚಲಿಸಿ ವಿಘ್ನೇಶ್ವರನು ಸೊಂಡಿಲಾಡಿಸುತ್ತ ಕೃಷ್ಣನು ನೀಡುವುದನ್ನು ಸೊಂಡಿಲಿನಲ್ಲಿ ಎತ್ತಿಕೊಂಡು ಬಾಯಿಗೊಯ್ದು ನುಂಗುತ್ತ, "ಕೃಷ್ಣಾ, ನಾನು ಕೊಡುವುದನ್ನು ನೀನೂ ತಿನ್ನ ಬೇಕು. ವಿಘ್ನೇಶ್ವರಾಯಣದಲ್ಲಿ ಇದು ಸುಂದರಕಾಂಡ!" ಎಂದು ಬೆಣ್ಣೆಯೊಂದಿಗೆ ಮಾಡಿದ ಕೆಲವು ಭಕ್ಷ್ಯಗಳನ್ನು ಕೃಷ್ಣನ ಬಾಯಿಗೂ ತುರುಕಿದನು. ತಿಂಡಿಗಳ ಹರಿವಾಣಗಳೆಲ್ಲ ಖಾಲಿಯಾಗತೊಡಗಿದುವು. ಯಶೋದೆ ಪೂಜಾ ಮಂದಿರಕ್ಕೆ ಬಂದು ಬಾಗಿಲು ತೆರೆಯಲಾಗದಿರಲು, ಕಿಟಕಿಯಿಂದ ಒಳಗೆ ನಡೆಯುವ ಸುಂದರಕಾಂಡವನ್ನು ನೋಡಿ ಸ್ತಂಭೀಭೂತಳಾದಳು ಗಾಬರಿಯಿಂದ ಅವಳ ಮೈ ಬೆವತಿತು. ಕಣ್ಣು ಜ್ಜಿಕೊಳ್ಳುತ್ತ. "ಮತ್ತೆ ನನಗೆ ಭ್ರಮೆಬಡಿಯಿತು! ನನ್ನ ಕಣ್ಣುಗಳಿಗೆ ಏನೋ ಮಾಯ ಕವಿದಿದೆ. "ಎಂದು ಗೊಣಗಿಕೊಂಡಳು. ಕೃಷ್ಣನು ಎದ್ದುಬಂದು ಬಾಗಿಲು ತೆರೆದುದನ್ನು ನೋಡಿ, ಸರಸರನೆ ಒಳಗೆ ಹೊಕ್ಕಳು ಯಶೋದೆ.

ನಿಜವೇ. ಅವಳು ನೋಡಿದುದೆಲ್ಲಾ ಮಾಯೆಯೇ! ವಿನಾಯಕ ವಿಗ್ರಹವು ವಿಗ್ರಹವಾಗಿಯೇ ಇದೆ. ಆದರೆ ನೈವೇದ್ಯ ಭಕ್ಷ್ಯಗಳೆಲ್ಲ ಖಾಲಿಯಾಗಿವೆ! "ಎಂಥಾ ತಿಂಡೀ ಬಾಕನಪ್ಪಾ ಕೃಷ್ಣಾ! ಪೂಜೆಗೆ, ಮೊದಲೇ ಎಲ್ಲಾ ಖಾಲಿಮಾಡಿದೆಯಲ್ಲೋ! ಸುಮ್ಮನೆ



ಬೆಳೆಯುತ್ತಿಯೇ ಹೊರತು ಬುದ್ಧಿ ಸ್ವಲ್ಪವೂ ಇಲ್ಲ!" ಎನ್ನುತ್ತ ಅವನ ಬೆನ್ನಿಗೆರಡು ಬಡಬಡನೆ ಬಾರಿಸಿದಳು.

ಅಷ್ಟರೊಳಗೆ ಕೃಷ್ಣನು ಅಲ್ಲಿಂದ ನುಸುಳಿ ಯಾರ ಕೈಗೂ ಸಿಕ್ಕದಂತೆ ಓಡುತ್ತಾ ಹೋಗಿ ಕಾಳಿಂದೀ ಮಡುವನ್ನು ತಲಪಿದನು. ಅದನ್ನು ನೋಡಿ, ಯಶೋದೆಯೂ ಇತರ ಗೋಪಿಕೆಯರೂ ಹೆದರಿ "ಅತ್ತಹೋಗದಿರೋ!" ಎಂದು ಕೂಗುತ್ತಾ ಓಡಿದರು.

ಕಾಳಿಂದೀ ಮಡುವನ್ನು ಸೇರಿದ ಕಾಳೀಯನೆಂಬ ಮಹಾಸರ್ಪವಾದ ವಿಘ್ನನಿಂದ ಗೋಕುಲ ನಿವಾಸಿಗಳು ತುಂಬಾ ಭಯಕಂಪಿತರಾಗಿದ್ದರು. ಕಾಳೀಯನ ವಿಷಜ್ವಾಲೆಗಳು ಆ ಪ್ರಾಂತವನ್ನೆಲ್ಲಾ ಪಾಳುಬೀಳಿಸಿದ್ದಿತು. ಕೃಷ್ಣನು ಮಡುವಿನ ಬದಿಯಲ್ಲಿದ್ದೊಂದು ಮರದ ಮೇಲೇರಿ, ಮಡುವಿನ ನಡುಭಾಗದವರೆಗೆ ವ್ಯಾಪಿಸಿದ್ದ ಕೊಂಬೆಯ ಮೇಲಿನಿಂದ ಮಡುವಿಗೇ ಹಾರಿ ಕಾಳೀಯ ನಾಗನ ನಡುನೆತ್ತಿಯ ಮೇಲೆ ಸಿಡಿಲಿನಹಾಗೆ ಬಿದ್ದನು. ಕೃಷ್ಣನ ಕಾಲಂದುಗೆಯ ಗೆಜ್ಜೆಗಳು ಘಲ್ಲುಘಲ್ಲೆನ್ನುತ್ತಿರಲು, ಕೃಷ್ಣನು ಕಾಳೀಯನ ತಲೆಗಳ ಮೇಲೆ ತಾಂಡವವಾಡ ತೊಡಗಿದನು. ಕಾಳೀಯ ಮರ್ದನವು ಚೆನ್ನಾಗಿ ನಡೆಯಿತು. ಕಾಳೀಯನ ಶಾಪ ತೊಲಗಿತು. ಅವನು ತನ್ನ ಕುಮಾರಿಯರನ್ನು ತೆಗೆದುಕೊಂಡು ಹೋಗಿ ಪಾತಾಳದಲ್ಲಿರುವ ವಾಸುಕಿಯ ವಶಕ್ಕೆ ಕೊಟ್ಟು, ಕಾಳೀಯ ರೂಪವನ್ನು ಉಪಸಂಹರಿಸಿಕೊಂಡು, ಮೊದಲಿನಂತೆ ವಿಘ್ನನಾಗಿ ವಿಘ್ನೇಶ್ವರನಿಗೆ ಅಧೀನನಾದನು.

ಕ್ಷೇಮವಾಗಿ ತೀರಕ್ಕೆ ಬಂದ ಕೃಷ್ಣನನ್ನು ಎತ್ತಿಕೊಂಡು ಯಶೋದೆ ಮನೆಗೆ ಬಂದಳು. ಆಗ ಪೂಜಾ ಮಂದಿರದ ನೈವೇದ್ಯದ ತಟ್ಟೆಗಳೆಲ್ಲ ತಾನು ಹೇಗೆ ಇಟ್ಟೆನೋ ಹಾಗೆಯೇ ಎಲ್ಲಾ ಬಗೆಯ ಭಕ್ಷ್ಯಗಳಿಂದಲೂ ತುಂಬಿಯುವುದನ್ನು ನೋಡಿ ಯಶೋದೆ ಪುನಃ ಬೆರಗಾದಳು. ಬಾಲಕೃಷ್ಣನ ಬೆನ್ನಿನಲ್ಲಿ ಮಾತ್ರ ಅವಳ ಬೆರಳಚ್ಚುಗಳು ಕಾಣಿಸುತ್ತಿದ್ದುವು. ಯಶೋದೆ ಅವುಗಳನ್ನು ನೋಡಿ, "ಅಹೋ! ನನ್ನ ಕೈಗಳು ಬಿದ್ದು ಹೋಗಬಾರದೆ? ನನಗೇ ಏನೋ ಮಾಯದ ರೋಗ ಹಿಡಿದಿದೆ. ನಿಷ್ಕಾರಣವಾಗಿ ಮಗನನ್ನು ಹೊಡೆದೆನಲ್ಲ! ಎಂಥಾ ಪಾಪಿ ನಾನು! ಇದೆಲ್ಲಾ ನೀನು ಚೌತೀಚಂದ್ರನನ್ನು ನೋಡಿದ ದುಷ್ಪರಿಣಾಮ ಕಂದಾ ! ಪಾರ್ವತಿಯ ಶಾಪ !" ಎಂದು ಗಳಗಳನೆ ಅತ್ತಳು.

"ಅಳಬೇಡಮ್ಮಾ! ತುಂಬಾ ಹೊತ್ತಾಯಿತು! ಪೂಜೆ ಮುಗಿಸಿಬಿಡಮ್ಮಾ!" ಎಂದನು ಕೃಷ್ಣ. ನಂದನೂ ಯಶೋದೆಯೂ ಕೃಷ್ಣನ ಕೈಯಿಂದಲೇ ವಿನಾಯಕ ಪೂಜೆ ಮಾಡಿಸಿದರು. ನೈವೇದ್ಯಗಳನ್ನು ಪ್ರಸಾದವಾಗಿ ಊರವರಿಗೆಲ್ಲಾ ಹಂಚಿದರು. ಆ ಭಕ್ಷ್ಯಗಳಲ್ಲಿ ಅಮೃತವು ಸೇರಿದಹಾಗೆ ಅನಿಸಿತು ಎಲ್ಲರಿಗೂ. ಆ ದಿನ ಗೋಕುಲದೊಳಗೆಲ್ಲಾ ಆನಂದದ ಅಲೆಗಳೇ ಅಲೆಗಳು!

ಕೃಷ್ಣನು ಬೆಳೆದು ದೊಡ್ಡವನಾದನು. ಇಂದ್ರನ ಕೋಪದಿಂದ ಬಂದಪ್ರಳಯ ಭಯಂಕರವಾದ ಮಳೆಯನ್ನು, ಗೋವರ್ಧನಗಿರಿಯನ್ನೆತ್ತಿ ಎಲ್ಲರನ್ನೂ ಕಾಪಾಡಿ, ಕೃಷ್ಣನು ಇಂದ್ರನ ಗರ್ವವನ್ನು ಭಂಗಿಸಿದನು. ಕ್ಷಮೆ ಕೇಳಿ ಪಾರಾಗಬೇಕಾಯಿತು ಇಂದ್ರನಿಗೆ.

ಗೋವರ್ಧನ ಪ್ರಾಂತದಲ್ಲಿ ಒಂದುದಿನ ಕೃಷ್ಣನು ದನಗಳನ್ನು ಕಾದುಕೊಂಡಿದ್ದಾಗ, ಕಂಕುಳಲ್ಲಿ ದೊಡ್ಡದೊಂದು ಮದ್ದಳೆಯನ್ನು ಇಟ್ಟುಕೊಂಡು ಬಂದ ಒಬ್ಬ ದೊಡ್ಡ ಮನುಷ್ಯನು. ಕೃಷ್ಣನನ್ನು ನೋಡಿ, "ಲೋ ಹುಡುಗಾ, ಇಲ್ಲಿ ಕೃಷ್ಣನೆಂಬ ಹುಡುಗನಿದ್ದಾನಂತೆ. ತುಂಬ ಚೆನ್ನಾಗಿ ಮುರಳೀ ಊದುವನೆಂದು ಹೇಳುತ್ತಾರೆ. ಅವನ ಮುರಳೀಗಾನವು ಎಂತಹುದೆಂದು ನೋಡ ಬೇಕಂತಲೇ ಬಂದಿದ್ದೇನೆ. ಅವನು ಎಲ್ಲಿರುವನೆಂದು ನಿನಗೆ ಗೊತ್ತೇನೋ?" ಎಂದು ಕೇಳಿದನು.

"ಮಹಾಸ್ವಾಮೀ. ನೀವು ಕೇಳುವ ಆ ಕೃಷ್ಣ ಪರಮಾಣು ಅಂದರೆ ನಾನೇ. ತಾವು ಯಾರೋ ಬಹುದೊಡ್ಡ ಮೃದಂಗ ವಿದ್ವಾಂಸರ ಹಾಗೆ ಇದ್ದೀರಿ. ತಾವು ಯಾರೆಂದು ಸ್ವಲ್ಪ ಹೇಳಿಬಿಡಿ ಸ್ವಾಮಿ" ಎಂದು ಕೃಷ್ಣನು ಬಾಗಿ ಕೈಮುಗಿದು ಕೇಳಿಕೊಂಡನು.

"ನನ್ನನ್ನು ಮೃದಂಗಕೇಸರಿ ಎನ್ನುತ್ತಾರೆ. ದಕ್ಷಿಣದೇಶದವನು ನಾನು. ಮಥುರಾನಗರಕ್ಕೆ ಹೋಗುತ್ತಿದ್ದೇನೆ. ಕಂಸರಾಜನು ದೊಡ್ಡ ಧನುರ್ಯಾಗವನ್ನು ಮಾಡುತ್ತಾನಂತೆ. ಅಲ್ಲಿ ನನ್ನ ಮದ್ದಳೆಯ ವಿದ್ವತ್ತನ್ನು ಪ್ರದರ್ಶಿಸ ಬೇಕೆಂತಲೇ ಹೊರಟಿದ್ದೇನೆ" ಎಂದನು ಮೃದಂಗಕೇಸರಿ.

ಆತನ ಕಾಲಿನಲ್ಲಿ ರತ್ನಖಚಿತವಾದ ಕಡಗವೂ, ಕೈಗಳಲ್ಲಿ ಕೆಂಪು ವಜ್ರಗಳುಳ್ಳ ಸಿಂಹ ಮುದ್ರೆಯ ವಂಕಿಗಳೂ ಇದ್ದುವು. ಕೊರಳಲ್ಲಿ ಬಂಗಾರದ ನಿಂಬೇಕಾಯಿಮಾಲೆ, ಕಿವಿಗಳಲ್ಲಿ ದೊಡ್ಡ ಗುಂಡು ಕುಂಡಲಗಳು ಧಗಧಗಿಸುತ್ತಿದ್ದುವು. ಮದ್ದಳೆ ತುಂಬಾ ನವರತ್ನಗಳನ್ನೂ, ಸ್ವರ್ಣಪದಕಗಳನ್ನೂ ಹೊದಿಸಲ್ಪಟ್ಟಿದ್ದುವು. ಅವನ ವಿದ್ವತ್ತಿನ ಕುರುಹುಗಳು ಅಪೋಘ!

ಕೃಷ್ಣನು ಅವುಗಳನ್ನು ನೋಡಿ ಆನಂದಪಡುತ್ತ, "ಸ್ವಾಮೀ, ನಾನು ದನಕಾಯುವ ಸಾಮಾನ್ಯ ಗೋವಳ. ನನ್ನ ಕೊಳಲು ಸಾದಾ ಬೊಂಗು ಬಿದಿರಿನದು. ನಿಮ್ಮಂಥ ದಕ್ಷಿಣ ದೇಶದ ವಿದ್ವಾಂಸರು ತಾಳಗಳಿಗೆ ಸುಪ್ರಸಿದ್ಧರು. ನಿಮ್ಮಂಥವರ ಮುಂದೆ ನಾನೆಲ್ಲಿ? ನಾನೇನೋ ಯಾವುದೋ ಒಂದು ರಾಗವನ್ನು ಊದಿ ದನಗಳನ್ನು ಕಾಯುವುದು ಬಿಟ್ಟರೆ, ಮತ್ತೇನೂ ಅರಿಯದ ಬರೀ ಗಾಳಿಹಾಡುಗಾರ, ಅಷ್ಟೇ!" ಎಂದನು.






೩

ಹಸನ್ ತನ್ನ ಕಥೆಯನ್ನು ಪೂರ್ತಿ ಹೇಳಿದ ಮೇಲೆ, ಅವಳು ತನ್ನ ಕಥೆಯನ್ನು ಕೂಡಾ ಈರೀತಿಯಾಗಿ ಹಸನನೊಂದಿಗೆ ಹೇಳ ತೊಡಗಿದಳು :

"ನಾವು ಒಬ್ಬ ದೊಡ್ಡ ಗಂಧರ್ವರಾಜನ ಕುಮಾರಿಯರು. ನಾವು ಒಟ್ಟಿಗೆ ಏಳು ಮಂದಿ ಸಹೋದರಿಯರು. ನಾವೆಲ್ಲರೂ ಒಬ್ಬ ತಂದೆಯ ಮಕ್ಕಳಾದರೂ ಒಂದೇ ತಾಯಿಯ ಮಕ್ಕಳು ಮಾತ್ರ ಅಲ್ಲ. ನಾನೂ ನನ್ನ ಅಕ್ಕನೂ ಎಲ್ಲರಿಗಿಂತ ಚಿಕ್ಕವರಾಗಿದ್ದೇವೆ. ಉಳಿದ ನಮ್ಮ ಐವರು ಅಕ್ಕಂದಿರೂ ಬೇಟೆಯಾಡಲು ಹೋಗಿದ್ದಾರೆ. ಬೇಗದಲ್ಲೇ ಹಿಂದಿರುಗಿ ಬರುತ್ತಾರೆ. ನಮ್ಮಂತಹ ಅಕ್ಕ ತಂಗಿಯರನ್ನು ಮದುವೆಯಾಗುವ ಅರ್ಹತೆಯುಳ್ಳ ಗಂಡುಗಳಾರೂ ಸೃಷ್ಟಿಯಲ್ಲೇ ಇಲ್ಲವೆಂದು ನಮ್ಮ ತಂದೆಯ ನಂಬುಗೆ. ಆದ್ದರಿಂದ ನಾವು ಶಾಶ್ವತವಾಗಿ ಕನ್ಯೆಯರಾಗಿಯೇ ಇರಬೇಕೆಂದು ಅವರು ನಿರ್ಣಯಿಸಿ, ನಮ್ಮ ವಾಸಕ್ಕಾಗಿಯೇ ಈ ಮಾರುಮೂಲೆಯ ಪ್ರದೇಶದಲ್ಲಿ ಪ್ರತ್ಯೇಕವಾದ ಈ ಭವನವನ್ನು ನಿರ್ಮಿಸಿದ್ದಾರೆ. ಈ ಪ್ರದೇಶವಂತೂ ಅತ್ಯಂತ ಮನೋಹರವಾದುದು. ಜಲಸಮೃದ್ಧಿಯಿಂದ ಎಲ್ಲಿ ನೋಡಿದರೂ ಹೂಗಳ ಗಿಡಗಳೂ, ಬಳ್ಳಿಗಳೂ, ಹಣ್ಣಿನ ಮರಗಳೂ ಕಾಣುತ್ತವೆ. ಜಲಕ್ರೀಡೆಯಾಡಲು ಸುಂದರವಾದ ಸರೋವರಗಳಿವೆ. ಅವುಗಳಲ್ಲಿ ರಾಜಹಂಸಗಳನ್ನು ನೋಡಿಕೊಂಡಿರುವುದೇ ಒಂದು ಚಂದ. ನಿಜಕ್ಕೂ ಸ್ವರ್ಗದಂತಹ ಈ ಪ್ರದೇಶದಲ್ಲಿ ನಾವು ಸುಖವಾಗಿದ್ದೇವೆ. ನಮಗೆ ಇಲ್ಲಿ ಒಂದೇ ಒಂದು ಕೊರತೆ ಇತ್ತು. ಎಷ್ಟು ಕಾಲವಾದರೂ ನಮಗೆ ನಮ್ಮದೇ ಮುಖಗಳ ಹೊರತು ಹೊಸ ಮುಖಗಳೇ ಕಾಣುತ್ತಿರಲಿಲ್ಲ. ನಮ್ಮ ಅದೃಷ್ಟದಿಂದಾಗಿ ನೀನು ಇಲ್ಲಿಗೆ ಬಂದೆ."

ಅವಳು ತನ್ನ ಪ್ರೀತಿಯ ತಮ್ಮನೊಂದಿಗೆ ಕಥೆ ಹೇಳಿಕೊಂಡಿದ್ದಾಗಲೇ ಉಳಿದ ಐದು ಮಂದಿ ರಾಜಕುಮಾರಿಯರೂ ತಮ್ಮ ಬೇಟೆಗಳನ್ನು ಮುಗಿಸಿ ಹಿಂದಿರುಗಿ ಬಂದರು. ಆಕಸ್ಮಿಕವಾಗಿ ತಮಗೆಲ್ಲ ಒಬ್ಬ ತಮ್ಮನು ಬಂದು ಸೇರಿದ ಸಮಾಚಾರ ತಿಳಿದು ಅವರಿಗೆಲ್ಲಾ ತುಂಬಾ ಸಂತೋಷವಾಯಿತು. ಅವರೆಲ್ಲಾ ಹಸನ್ನನಿಂದ ತಮ್ಮೊಂದಿಗೆ ಬಹಳ ದಿನ



ಇರುವುದಾಗಿ ವಾಗ್ದಾನ ಪಡೆದುಕೊಂಡು ತೃಪ್ತರಾದರು. ಹಸನ್ನನಿಗೂ ನೆಮ್ಮದಿಯುಂಟಾಯಿತು.

ಹಸನ್ ಆ ಪ್ರದೇಶದ ಚಿತ್ರ ವಿಚಿತ್ರಗಳನ್ನು ನೋಡಿ ಸವಿಯುತ್ತಾ ಆ ಗಂಧರ್ವ ರಾಜಕುಮಾರಿಯರೊಂದಿಗೆ ಇರುತ್ತ ಅವರೊಂದಿಗೆ ವಿಹಾರಕ್ಕೂ, ಬೇಟೆಗೂ ಹೋಗುತ್ತಿದ್ದನು. ಆ ಅಕ್ಕಂದಿರನ್ನು ನೋಡಿಕೊಂಡು ಅವನು ಎಷ್ಟು ಹೆಮ್ಮೆಪಟ್ಟುಕೊಂಡನೋ ಅವನನ್ನು ನೋಡಿ ಅವರುಗಳೂ ಅಷ್ಟೇ ಆನಂದಗೊಂಡಿರುತ್ತಿದ್ದರು. ತೋಟದಲ್ಲಿಯೂ, ನೀರೋಳಿಗಳಲ್ಲಿಯೂ ಆಟವಾಡುತ್ತ ಒಬ್ಬರ ಲೋಕದ ವಿಚಿತ್ರಗಳನ್ನು ಕುರಿತು, ಇನ್ನೊಬ್ಬರೊಂದಿಗೆ ಹೇಳುತ್ತ ಆ ಅಕ್ಕಂದಿರೂ ಅವರ ತಮ್ಮನೂ, ಅನ್ಯೋನ್ಯವಾಗಿದ್ದರು.

ಒಂದುದಿನ ಅವರೆಲ್ಲರೂ ಪೊದರುಗಳ ಮಧ್ಯದಲ್ಲಿ ಕುಳಿತು ಗಾಯನ ಮಾಧುರ್ಯವನ್ನು ಸವಿದುಕೊಂಡಿರುವಾಗ, ಒಮ್ಮೆಗೇ ದೂರಾಕಾಶದಲ್ಲಿ ಧೂಳೆದ್ದು ಸೂರ್ಯಬಿಂಬವನ್ನು ಮರೆಸಿಹಾಕಿತು. ಗುಡುಗಿನಂತಹ ಶಬ್ದವೂ ಬರತೊಡಗಿತು.

ಅದನ್ನು ನೋಡಿ ರಾಜಕುಮಾರಿಯರು ಏಳು ಮಂದಿಯೂ ಹೆದರಿದಂತೆ ಹಸನ್ನನ್ನು ನೋಡಿ, "ಓಡಿಹೋಗಿ ಎಲ್ಲಿಯಾದರೂ ಅಡಗಿಕೊಂಡುಬಿಡು" ಎಂದು ತ್ವರೆಪಡಿಸಿದರು. ಕಿರಿಯ ಕುಮಾರಿ ಹಾರಿ ಎದ್ದು ಹಸನ್ನನ್ನು ಕೈಹಿಡಿದು ಎಳೆದುಕೊಂಡು ಹೋಗಿ, ಒಂದು ಕಡೆ ಬಚ್ಚಿಟ್ಟಳು.

ನೋಡ ನೋಡುತ್ತಿರಲು ಗಂಧರ್ವರ ಬಳಗವೊಂದು ಆಕಾಶಮಾರ್ಗದಿಂದ ಬಂದು, ಆ ಭವನದ ಮುಂದೆ ಇಳಿಯಿತು. ಅವರು ಬಂದ ಕಾರಣವೇನೆಂದರೆ, ಒಬ್ಬ ದೊಡ್ಡ ಗಂಧರ್ವರಾಜನ ಗೌರವಾರ್ಥವಾಗಿ ಆ ಕುಮಾರಿಯರ ತಂದೆ ಒಂದು ಔತಣ ಮಾಡಿಸುವನಂತೆ. ಅದಕ್ಕಾಗಿ ತನ್ನ ಕುಮಾರಿಯರನ್ನು ಕರೆದುಕೊಂಡು ಬರಲು ಅವನು ತನ್ನ ಪರಿವಾರವನ್ನು ಕಳುಹಿಸಿದ್ದಾನೆ.

ಈ ಸಮಾಚಾರವನ್ನು ತಿಳಿದು ಹಸನ್ನನ್ನು ಅಡಗಿಸಿಟ್ಟ ಕೊನೆಯ ಕುಮಾರಿ ಅವನ ಬಳಿಗೆ ಬಂದು, "ತಮ್ಮಾ, ನಿನ್ನನ್ನು ಒಂಟಿಯಾಗಿಬಿಟ್ಟು ಕೆಲವು ದಿನ ನಾವೆಲ್ಲಾ ಹೋಗಲೇಬೇಕಾಗಿದೆ. ಇಕೋ ಈ ಬೀಗದ ಕೈಗಳ ಗೊಂಚಲನ್ನು ತೆಗೆದುಕೋ. ನಾವು ತಿರುಗಿಬರುವ ವರೆಗೆ ಈ ಭವನವೆಲ್ಲಾ ನಿನ್ನದೇ. ಒಂದು ವಿಷಯ ಮಾತ್ರ ನೆನಪಿರಲಿ. ಇದೊಂದು ಬೀಗದ ಕೈಯ ಕೋಣೆಗೆ ಮಾತ್ರ ಪ್ರವೇಶಿಸಲೇ ಬೇಡ!" ಎಂದು ನೀಲಮಣಿ ಹೊದೆಸಿದ ಒಂದು ಬೀಗದ ಕೈಯನ್ನು ಅವನಿಗೆ ತೋರಿಸಿ ಎಚ್ಚರಿಸಿದಳು. ತರುವಾಯ ಏಳುಮಂದಿ ರಾಜಕುಮಾರಿಯರೂ, ತಮ್ಮನ್ನು ಕರೆಯಲು ಬಂದವರೊಂದಿಗೆ ತಂದೆಯ ಮನೆಗೆ ಹೊರಟುಹೋದರು.

ಒಮ್ಮೆಗೇ ಅವರೆಲ್ಲ ಹೊರಟುಹೋದ ಮೇಲೆ ಹಸನ್ನನಿಗೆ ಆ ಭವನವೂ, ಸುತ್ತುಮುತ್ತಣ ಸುಂದರ




ಪ್ರದೇಶವೂ ಸರ್ವಶೂನ್ಯವೆನಿಸಿತು. ಏನೂ ತೋರದೆ ಬಿಕೋ ಎಂದು ಭಣಭಣಿಸಿತು. ಅವನು ಕಾಲು ಸುಟ್ಟುಕೊಂಡ ಬೆಕ್ಕಿನಹಾಗೆ, ಒಂದು ಕಡೆಯಿಂದ ಇನ್ನೊಂದು ಕಡೆಗೆ, ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ಎಡತಾಕತೊಡಗಿದನು. ತನ್ನ ಅಕ್ಕಂದಿರು ಉಪಯೋಗಪಡಿಸುವ ವಸ್ತುಗಳನ್ನೂ, ಅವರು ತಿರುಗಾಡುವ ಜಾಗಗಳನ್ನೂ ನೋಡಿ ವೇದನೆ ಪಡತೊಡಗಿದನು. ಹಾಗೆ ತಿರುಗುತ್ತಾ ತಿರುಗುತ್ತಾ ತೆಗೆಯಬಾರದೆಂಬ ಕೋಣೆಯ ಹತ್ತಿರ ಬಂದನು. ಅವನ ಕೈಯಲ್ಲಿದ್ದ ಬೀಗದ ಕೈಗೊಂಚಲಿನಲ್ಲಿ ನೀಲಮಣಿಯ ಬೀಗದಕೈ ಎದ್ದು ಕಾಣುತ್ತಿತ್ತು. ಆ ಕೋಣೆಯನ್ನು ತೆರೆಯಬಾರದೆಂದು ಸಣ್ಣಕ್ಕನು ಹೇಳಿದುದು ನೆನಪಿಗೆ ಬಂದು, ಅಲ್ಲಿಂದ ಹಿಂದೆ ಹೋದನು.

ಆದರೆ ಅವನ ತಲೆಯೊಳಗಿದ್ದ ಆಲೋಚನೆ ಹಿಂದಿರುಗಲಿಲ್ಲ. "ಈ ಬಾಗಿಲನ್ನು ತೆರೆಯಬಾರದೆಂದು ಎಚ್ಚರಿಸಲು ಕಾರಣವೇನಿದ್ದೀತು? ಆ ಕೋಣೆಯೊಳಗೆ ಅಂತಹ ವಿಚಿತ್ರ ವಸ್ತು ಏನಿದ್ದೀತು? ಏನೇ ಇರಲಿ, ನನಗೇಕೆ ಆ ವಿಚಾರ? ಹೋಗುವುದಿಲ್ಲವೆಂದು ಅಕ್ಕನ ಹತ್ತಿರ ಮಾತು ಕೊಟ್ಟಿದ್ದೇನೆ. ಹೋಗಲೇಬಾರದು" ಹೀಗೆಂದುಕೊಂಡು ಮತ್ತೆ ಮತ್ತೆ ಹಿಂದಿರುಗಿದನು. ಆದರೂ ಆ ಕುತೂಹಲದ ಯೋಚನೆ ಅಡಗುವುದೇ ಇಲ್ಲ. ಅದರ ಆಲೋಚನೆಯಿಂದ ಅವನಿಗೆ ನಿದ್ದೆ ಕೂಡಾ ಬರಲಿಲ್ಲ. ಏನಾದರಾಗಲಿ, ಆ ಬಾಗಿಲು ತೆರೆದೇ ಬಿಡೋಣ. ಈಗಲೇ ಬೇಡ. ಬೆಳಗಾಗುವ ವರೆಗೆ ಕಾಯೋಣ. ಹೀಗಂದುಕೊಂಡು ಕಡೆಗೆ "ಪ್ರಾಣ ಹೋದರೂ ಹೋಗಲಿ. ಅದರೊಳಗೆ ಏನಿರುವುದೋ ನೋಡಲೇಬೇಕು!" ಎಂದು ನಿಶ್ಚಯಕ್ಕೇ ಬಂದನು.

ಹಸನ್ ಒಂದು ದೀವಿಗೆಯನ್ನು ಹಿಡಿದುಕೊಂಡು ಆ ಕೋಣೆಯ ಹತ್ತಿರ ಹೋಗಿ, ಬೀಗದೊಳಗೆ ನೀಲಮಣಿಯ ಬೀಗದಕೈ ಹಾಕಿ ತಿರುಗಿಸಿದನು. ಶಬ್ದವೇನಿಲ್ಲದೆ ಆ ಬಾಗಿಲು ತೆರೆಯಿತು.

ಆ ಕೋಣೆಯಲ್ಲಿ ಒಂದು ಮರದ ಸಾಮಾನಾಗಲಿ ತಿವಾಸಿಯೋ, ಚಾಪೆಯೋ ಏನೂ ಇರಲಿಲ್ಲ. ಶುದ್ಧ ಖಾಲಿಯಾಗಿದ್ದ ಆ ಕೋಣೆಯ ಒಂದು ಬದಿಯಲ್ಲಿ ಒಂದು ಏಣಿಯನ್ನು ಆನಿಸಿಡಲಾಗಿತ್ತು. ಅದು ಕೋಣೆಯ ಮೇಲ್ಮುಚ್ಚಿಗೆಯನ್ನು ದಾಟಿ ಮೇಲೆ ಹೋಗಿತ್ತು. ಹಸನ್ ತನ್ನ ಕೈಯಲ್ಲಿದ್ದ ದೀವಿಗೆಯನ್ನು ಕೆಳಗಿಟ್ಟು, ಏಣಿಯ ಮೇಲೇರಿ ಮುಚ್ಚಿಗೆಯ ಮೇಲೇರಿ ಹೋದನು.

ಆ ಮೇಲ್ಮಾಳಿಗೆ ಸಮತಲವಾಗಿದ್ದಿತು. ಸುತ್ತೂ ಮುಖ ತಿರುವಿದಾಗ ಅಲ್ಲೊಂದು ಚಿಕ್ಕತೋಟವಿರುವುದನ್ನು ನೋಡಿದನು. ಅದರಲ್ಲಿ ಸುಂದರವಾದ ಅಲಂಕಾರದ ಗಿಡಗಳೂ, ಹೂವಿನ ಗಿಡಗಳೂ ಕಾಣುತ್ತಿದ್ದುವು. ಅವನು ಆ ತೋಟದೊಳಗೆ ಹೋದ ಕೂಡಲೇ ಅತ್ಯದ್ಭುತವಾದ ಮನೋಹರ ದೃಶ್ಯವು




ಅವನ ಕಣ್ಣಿಗೆ ಬಿತ್ತು. ಅವನ ಮುಂದೆ ನಿಶ್ಚಲವಾಗಿದ್ದ ಒಂದು ಸರಸ್ಸು, ಕನ್ನಡಿಯ ಹಾಗೆ ಆಕಾಶವನ್ನು ಪ್ರತಿಬಿಂಬಿಸಿಕೊಂಡಿತ್ತು. ಆ ಸರಸ್ಸಿನ ಆಚೆಯ ಭಾಗದಲ್ಲಿ ವಿಚಿತ್ರಾಕೃತಿಯ ಒಂದು ಭವನವು ಕಾಣುತ್ತಿತ್ತು. ಅದರ ಬುರುಜುಗಳೂ, ಮುಗುಟಗಳೂ ಎತ್ತರದಲ್ಲಿದ್ದು ಆಕಾಶವನ್ನು ಮುದ್ದಿಟ್ಟುಕೊಂಡಿದ್ದುವು. ಆ ಭವನಕ್ಕೂ, ಸರೋವರಕ್ಕೂ ಮಧ್ಯದಲ್ಲಿ ಹಾಲುಗಲ್ಲಿನಿಂದ ಕಟ್ಟಲ್ಪಟ್ಟ ಮೆಟ್ಟಿಲುಗಳಿದ್ದುವು, ಮೆಟ್ಟಿಲಿನ ಕೆಳಗೆ ನೀರಿನ ಮೇಲ್ಭಾಗದಲ್ಲಿ, ಕೆಂಪು, ಪುಷ್ಯರಾಗ, ಬೆಳ್ಳಿ, ಬಂಗಾರಗಳಿಂದ ನಿರ್ಮಿಸಲ್ಪಟ್ಟ ಜಗಲಿಯೊಂದಿತ್ತು. ಆ ಜಗಲಿಯಲ್ಲಿ ಗುಲಾಬಿ ಬಣ್ಣಗಳ ನಾಲ್ಕು ಕಂಬಗಳಿದ್ದುವು. ಅವು ಸ್ಫಟಿಕ ಶಿಲೆಯಿಂದಾದ ಕಂಬಗಳು. ಆ ಕಂಬಗಳಿಗೆ ಹಸಿರುಬಣ್ಣದ ರೇಶ್ಮೆಯಂತಹ ಬಟ್ಟೆಯನ್ನು ಸುತ್ತಲಾಗಿತ್ತು. ಅವುಗಳ ನಡುವೆ ಜಗಲಿಯಲ್ಲಿ ಸುಂದರವಾದೊಂದು ಸಿಂಹಾಸನವಿದ್ದಿತು. ಅವುಗಳಲ್ಲೆಲ್ಲ ಕಾಣುವ ಕಲಾತ್ಮಕಗಳು ಭೂಲೋಕದವರಿಂದ ಸಾಧ್ಯವೆನಿಸುವಂತಹುದಲ್ಲ.

ಹಸನ್ ಕಟ್ಟಿಗೆ ಬೊಂಬೆಯ ಹಾಗೆ ನಿಂತು ಆ ಅದ್ಭುತ ದೃಶ್ಯವನ್ನು ನೋಡಿ, ಆನಂದಿಸಿಕೊಂಡಿದ್ದ ಸಮಯದಲ್ಲಿ, ಆಕಾಶದ ಕಡೆಯಿಂದ ದೊಡ್ಡ ದೊಡ್ಡ ಹತ್ತು ಪಕ್ಷಿಗಳು ಹಾರುತ್ತಾ ಬಂದು ಕೆಳಗಿಳಿದು, ಸರೋವರದ ತೀರದಲ್ಲಿ ನೆಲಮುಟ್ಟಿ ನಿಂತವು. ಅವು ಸ್ವಲ್ಪಹೊತ್ತು ಅತ್ತ ಇತ್ತ ತಿರುಗಾಡಿದ ಮೇಲೆ, ದೊಡ್ಡ ಪಕ್ಷಿ ಸಿಂಹಾಸನದ ಹತ್ತಿರ ಹೋಯಿತು. ಉಳಿದ ಒಂಬತ್ತು ಪಕ್ಷಿಗಳೂ ಅದನ್ನು ಅನುಸರಿಸಿದುವು.

ಹಸನ್ ಬೆಕ್ಕಸಬೆರಗಾಗಿ ಮೈಮರೆತು ನೋಡುತ್ತಿರಲು, ಆ ಪಕ್ಷಿಗಳೆಲ್ಲ ತಮ್ಮ ಪಕ್ಷಿ ತೊಡುಗೆಯನ್ನು ಬಿಟ್ಟು ಸ್ತ್ರೀಯರ ಆಕಾರದಲ್ಲಿ ಹೊರಗೆ ಬಂದುವು. ಒಬ್ಬೊಬ್ಬಳೂ ಒಂದೊಂದು ಚಂದ್ರಬಿಂಬದಂತಿದ್ದಳು. ಎಲ್ಲರೂ ತಮ್ಮ ಪಕ್ಷಿ ತೊಡುಗೆಯನ್ನು ಬಿಟ್ಟ ಮರುಕ್ಷಣವೇ, ನಿಶ್ಚಲವಾಗಿದ್ದ ಸರೋವರದ ನೀರಿಗೆ ಹಾರಿಕೊಂಡರು. ಈಗ ನೀರು ಚೆನ್ನಾಗಿ ಚಲಿಸತೊಡಗಿತು. ಆ ಸ್ತ್ರೀಯರು ಸರೋವರದಲ್ಲಿ ಈಜಾಡುತ್ತ ಒಬ್ಬರನ್ನೊಬ್ಬರು ಓಡಿಸುತ್ತಾ, ನೀರು ಹಾರಿಸುತ್ತಾ, ಗಟ್ಟಿಯಾಗಿ ನಗತೊಡಗಿದರು. ಅವರ ನಗುಗಳಿಗೆ ದಿಕ್ಕುಗಳೆಲ್ಲ ಪ್ರತಿಧ್ವನಿ ಕೊಟ್ಟವು. ಅಂದಚಂದ ಚಾಲಾಕೀತನಗಳಲ್ಲಿ ಎಲ್ಲರನ್ನೂ ಮೀರಿಸಿದವಳೊಬ್ಬಳು ಸೌಂದರ್ಯದಲ್ಲಿಯೂ ಉಳಿದವರಿಗಿಂತ ಹೆಚ್ಚಿನವಳೇ. ಹಸನ್ನನ್ನು ಪ್ರಬಲ ಶಕ್ತಿಯಿಂದ ಆಕರ್ಷಿಸಿದವಳು ಅವಳೇ. ಅವನು ಒಂದು ಪೊದೆಯ ಮರೆಯಲ್ಲಿ ಅಡಗಿ ಕುಳಿತುಕೊಂಡು ಅವಳನ್ನೇ ತದೇಕದೃಷ್ಟಿಯಿಂದ ನೋಡುತ್ತಿದ್ದನು.

ಬೇಗದಲ್ಲೇ ಆ ಕನ್ಯೆಯರು ತಮ್ಮ ಸ್ನಾನಗಳನ್ನು ಮುಗಿಸಿ, ಮೇಲೆ ಬರುತ್ತ, ಪಾರದರ್ಶಕವಾದ ಬಟ್ಟೆ

ಗಳನ್ನು ಧರಿಸಿ. ಸ್ವಲ್ಪಹೊತ್ತು ವಿಶ್ರಾಂತಿಯಾಗಿ ಕುಳಿತರು. ಸ್ವಲ್ಪ ಹೊತ್ತಿಗೆ ಅವರಲ್ಲಿ ಒಬ್ಬಳು "ಬೆಳಗಾಗಲಿಕ್ಕಾಯಿತು. ಇನ್ನು ಹೊರಟು ಹೋಗೋಣವೇ ?" ಎಂದಳು.

"ಹೋಗೋಣ" ಎನ್ನುತ್ತ ಎಲ್ಲರೂ ಒಂದೇ ಸಾರಿ ಎದ್ದು ತಮ್ಮ ತಮ್ಮ ಪಕ್ಷಿಯ ತೊಡುಗೆಯನ್ನು ತೊಟ್ಟುಕೊಂಡು ಒಮ್ಮೆಗೇ ಆಕಾಶಕ್ಕೆ ಹಾರಿ, ಬಂದ ದಾರಿಯಲ್ಲೇ ಹೊರಟುಹೋದರು.

ಮತ್ತೆ ಹಸನ್ನನಿಗೆ ಶೂನ್ಯವು ಕವಿಯಿತು. ಅವರು ಹೊರಟುಹೋದ ಆಕಾಶದ ದಿಕ್ಕನ್ನೇ ನೋಡುತ್ತಾ ಬಹಳ ಹೊತ್ತು ಅಲ್ಲೇ ನಿಂತನು. ಅದುವರೆಗೂ ಹಸನ್ನನಿಗೆ ಪ್ರೇಮವೆಂದರೇನೆಂದೇ ಗೊತ್ತಿರಲಿಲ್ಲ. ಅದು ಏನೆಂಬುದು ಈಗ ಅವನಿಗೆ ತಿಳಿಯಿತು. ತಿಳಿದುದರಿಂದ ಜೀವಿತವೇ ಶೂನ್ಯವಾಗಿಹೋದಂತೆ ಅನಿಸಿತು. ಅವನು ಆ ದಿನವನ್ನೆಲ್ಲಾ ಒಂದು ಯುಗದ ಹಾಗೆ ಕಳೆದು, ಮಾರಣೇದಿನ ರಾತ್ರಿಯಾದ ಕೂಡಲೇ ಆ ಸರೋವರದ ಬಳಿಗೆ ಬಂದನು. ಆದರೆ ಆ ರಾತ್ರಿ ಆ ಪಕ್ಷಿ ಕನ್ಯೆಯರು ಬರಲೇ ಇಲ್ಲ. ಅದು ಅವನಿಗೆ ಮತ್ತೊಂದು ಯುಗವಾಯಿತು. ಹಸನ್ ಅನ್ನ ನೀರು ನಿದ್ದೆಗಳನ್ನು ಬಿಟ್ಟು ನಿರಾಶೆಯೊಳಗೆ ಬಿದ್ದು, "ಛೀ ಛೀ ! ಹೀಗೆ ಬದುಕುವುದಕ್ಕಿಂತ ಸಾಯುವುದೇ ಒಳ್ಳೇದು !" ಎಂದುಕೊಳ್ಳುತ್ತ, ದಿನದಿಂದ ದಿನಕ್ಕೆ ಕೃಶನಾಗುತ್ತ ಹಾಸಿಗೆ ಹಿಡಿದನು. ಹತ್ತು ದಿನಗಳು ಕಳೆದ ಮೇಲೆ ಗಂಧರ್ವ ರಾಜಕುಮಾರಿಯರು ತಂದೆಯ ಮನೆಯಿಂದ ಹಿಂದಿರುಗಿ ಬಂದರು. ಬಂದ ಕೂಡಲೇ ಸಣ್ಣಕ್ಕ ಹಸನ್ನನ್ನು ಹುಡುಕುತ್ತಾ ಬಂದು, ಅವನ ದುಸ್ಥಿತಿಯನ್ನು ನೋಡಿ ಕಣ್ಣೀರು ತುಂಬಿ, "ಇದೇನಿದು ಪ್ರಿಯ ತಮ್ಮಾ ? ಏಕೆ ಹೀಗಾಗಿ ಹೋದೆ ? ಮುಖವೆಲ್ಲಾ ಬಾಡಿ ಹೋಗಿದೆಯಲ್ಲಾ ? ಕಣ್ಣುಗಳು ಹೊಂಡಕ್ಕಿಳಿದಿವೆ. ನಿನ್ನ ರೋಗಕ್ಕೆ ಕಾರಣವೇನೆಂದು ಮರೆಮಾಜದೆ ಹೇಳಿಬಿಡು !" ಎಂದಳು.

ಹಸನ್ ಕಣ್ಣೀರು ತುಂಬಿಕೊಂಡು, "ನಾನು ಮಾಡಿದ ತಪ್ಪಿಗೆ ಶಿಕ್ಷೆ ಅನುಭವಿಸುತ್ತಿದ್ದೇನೆ ಅಕ್ಕಾ. ಯಾರೂ ನನಗೆ ಸಹಾಯಮಾಡಲು ಸಾಧ್ಯವಿಲ್ಲ. ಹೀಗೆಯೇ ಪ್ರಾಣ ಬಿಡುತ್ತೇನೆ" ಎಂದನು.

"ಹಾಗೆಲ್ಲಾ ಹೇಳಬೇಡವೋ ! ನಿನ್ನ ಪ್ರಾಣಕ್ಕೆ ನಮ್ಮೆಲ್ಲರ ಪ್ರಾಣಗಳೂ ಅಡ್ಡಬರುತ್ತವೆ. ಹಾಗೂ ನೀನು ಸತ್ತರೆ ನಿನ್ನೊಂದಿಗೆ ನಾನು ಖಂಡಿತಾ ಸಾಯುತ್ತೇನೆ" ಎಂದಳು ಸಣ್ಣಕ್ಕ.

"ನಾನು ಆಹಾರ ಮುಟ್ಟಿ ಹತ್ತು ದಿನಗಳಾಯಿತು ಅಕ್ಕಾ" ಎಂದು ಹಸನ್ ನಡೆದ ಸಂಗತಿಯನ್ನೆಲ್ಲಾ ಮರೆಮಾಜದೆ ಅಕ್ಕನೊಂದಿಗೆ ಹೇಳಿದನು.

—(ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

ಗೆದ್ದ ಶೀರ್ಷಿಕೆಗಳು ೧೯೮೩ ಮಾರ್ಚಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ







M Natarajan — D. R. Mohan Rao

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಜನವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ನವೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: "ಕಣ್ಣಿಗೆ ಕಂಡರೂ..."

ಎರಡನೇ ಫೋಟೋ : "ಕೈಗೆ ನಿಲುಕದು"

ಕಳುಹಿಸಿದವರು : ಚೇತನ ಮೋಹನ್

ಕೆ. ಎನ್. ಬಡಾವಣೆ-೫೬೦೦೨೨

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

Ravi

# ರಾಜೂ ಮತ್ತು ಮೊಗವಾಡ

ಆದಿನ ರಾಜೂನ ಚಿಕ್ಕ ತಂಗಿ ಮೀನಾಳ ಹುಟ್ಟುಹಬ್ಬ. ರಾಜೂಗೆ ಅದು ಭಾರಿ ಸಂತೋಷದ ಸಂದರ್ಭ. ನಂದು, ವಿನಯ್, ರೇಖಾ, ಅಶೋಕ್ ಎಲ್ಲರೂ ಬರಲಿದ್ದಾರೆ, ಚೆಂದದ ಉಡುಗೊರೆಗಳನ್ನು ತರಲಿದ್ದಾರೆ.

ರಾಜೂ ಯಾವ ಉಡುಗೊರೆ ಕೊಡುವುದು ಎಂದು ಯೋಚಿಸ ತೊಡಗಿದ. ಅದು ವಿಶೇಷ ತರದ, ಬಲು ಅಸಾಧಾರಣವಾದ ಉಡುಗೊರೆಯಾಗಬೇಕು ಎಂದು ಅವನ ಇಚ್ಛೆ.

ಅವನು ಯೋಚಿಸತೊಡಗಿದ. ಬಹಳ, ಬಹಳ ಯೋಚನೆ ಮಾಡಿದ. ಥಕ್ಕನೆ ಅವನಿಗೆ ಒಂದು ವಿಚಾರ ಹೊಳೆಯಿತು.

ಮೊಗವಾಡ, ಸುಂದರವಾದ, ವರ್ಣರಂಜಿತ ಮೊಗವಾಡವನ್ನು ಉಡುಗೊರೆಯಾಗಿ ಕೊಡಬೇಕು. ಟೋಪಿಯ ಮೇಲೆ ಹಸುರು ಪಟ್ಟಿಗಳಿರಬೇಕು, ಗಲ್ಲ ನಸುಗೆಂಪಾಗಿರಬೇಕು. ತುಟಿಗಳು ಕಡು ಕೆಂಪಾಗಿರಬೇಕು.

ಒಂದು ರಟ್ಟು ಹಾಳೆಯ ತುಂಡನ್ನು ಆಕಾರಕ್ಕೆ ಸರಿಯಾಗಿ ಕತ್ತರಿಸಿ, ಒಂದು ಬ್ರಶ್‌ನಿಂದ ಬೇಕಾದಂತೆ ಬಣ್ಣ ಹಚ್ಚಿ ಬಲು ಬೇಗನೆ ಒಂದು ಮೊಗವಾಡವನ್ನು ಸಿದ್ಧಗೊಳಿಸಿದನು.

ಎಷ್ಟು ವರ್ಣರಂಜಿತವಾದ ಉಡುಗೊರೆ! ಮೀನಾಳಿಗೆ ಆನಂದವೇ ಆನಂದ!

ರಾಜೂನನ್ನು ಮತ್ತು ಅವನ ಅದ್ಭುತ ಉಡುಗೊರೆಯನ್ನು ಎಲ್ಲರೂ ಹೊಗಳಿದರು.

ರಾಜೂಗೆ ಪೇಂಟ್ ಮಾಡುವುದು ಸಾಧ್ಯವಾದರೆ ನಿಮಗೂ ಸಾಧ್ಯವಾಗುವುದು.



ಕ್ಯಾಮ್ಲಿನ್
ಪ್ರೈವೇಟ್
ಲಿಮಿಟೆಡ್,
ಆರ್ಟ್ ಮಟೀರಿಯಲ್
ಡಿವಿಜನ್, ಜೆ. ಬಿ. ನಗರ್,
ಬೊಂಬಾಯಿ- 400 059.

## ಕ್ಯಾಮೆಲ್

ವಾಟರ್ ಕಲರ್ಸ್
ಮತ್ತು ಪೋಸ್ಟರ್ ಕಲರ್ಸ್.









ಕ್ಯಾಮ್ಲಿನ್ ಅನ್‌ಬ್ರೇಕೆಬ್‌ಲ್ ಪೆನ್ಸಿಲ್‌ಗಳ ತಯಾರಕರಿಂದ

VISION 791 KAN

ರಾಮ ಮತ್ತು ಶ್ಯಾಮ

# ಮೋಸ ಹೋಗಬೇಡಿರಿ

ಸಂತೆಯಿಂದ ಮರಳುತ್ತಿದ್ದ
ರಾಮ ಶ್ಯಾಮರು ಅಳುತ್ತಿದ್ದ ಮಕ್ಕಳಿಬ್ಬರನ್ನು ಕಂಡರು.






















everest/81/PP/102-kn






ಪಾರ್ಲೆ ಪಾಪಿನ್ಸ್ ಅವನ್ನು ಬಾಯಿಯಲ್ಲಿ ಹಾಕಿಕೊಳ್ಳುವ ಮೊದಲು ಬೆಳ್ಳಿ ಪಟ್ಟೆಗಳಿವೆಯೊ ನೋಡಿಕೊಳ್ಳಿರಿ.
ಈಗ, ನಕಲಿಗಾರರು ನಿಮ್ಮನ್ನು ಮೋಸಗೊಳಿಸುವಂತಿಲ್ಲ.